ಬಿ. ಜಿ. ಎಲ್. ಸ್ವಾಮಿ

# ಪಂಪನ ಕಾವ್ಯಗಳಲ್ಲಿ ಹೂಗಿಡಮರಬಳ್ಳಿಗಳು

ಕೆಂದಳಿರನ್ನೂ ಗುತ್ತಿಹೂವನ್ನೂ ತಳೆದ ಮಾವಿನಮರವೇ ಒಂದು ಕನ್ನಡ ಕಾವ್ಯವಾಯಿತು. ಕವಿತಾಗುಣಾರ್ಣವನಿಗೆ. ಕಾವ್ಯಾರಣ್ಯದಲ್ಲಿ ಎಷ್ಟೋ ಬಗೆಯ ಸಸ್ಯಗಳು ಬೆಳೆಯುತ್ತವೆ, ಆದರೆ ರಸಿಕರಾದ ದುಂಬಿಗಳೂ ಕೋಗಿಲೆಗಳೂ ಅರಸಿಕೊಂಡು ಬಂದು ಮುತ್ತುವುದು ಈ ಒಂದು ಮರವನ್ನೇ. “ಮುತ್ತುಂ ಮೆಣಸುಂ ಕೋಡಂತೆ” ಇರದೆ, ದೇಸಿಯೂ ಮಾರ್ಗವೂ (ಕೆಂದಳಿರೂ ಹೂಕೊತ್ತೂ ಅಥವಾ ಹೂಕೊತ್ತೂ ಕೆಂದಳಿರೂ) ಒಂದರೊಡನೊಂದು ಹುದುವಾಗಿ ಕಲೆತು ಅನುವಾದ ಬಂಧವೇ ಒಳ್ಳೆಯ ಕಾವ್ಯದ ಲಕ್ಷಣ ಎಂಬ ಧ್ವನಿಯನ್ನು ಇಂಥ ಮಾವಿನ ಮರದಲ್ಲಿ ಚಿತ್ರಿಸಿದ್ದಾನೆ. ಪಂಪ (ವಿ.ವಿ. ೧–೮). ಗಿಡಮರಹೂಬಳ್ಳಿಗಳಲ್ಲಿ ಕವಿತೆಯನ್ನು ಕಂಡ ಅಪೂರ್ವ ಕನ್ನಡ ಕವಿ ಪಂಪ. ಚಾರಿತ್ರಿಕತೆಯೊಂದರಿಂದ ಮಾತ್ರ ‘ಆದಿ’ಯಾದ ಕವಿಯಲ್ಲ ಪಂಪ; ಬಗೆ ಬಗೆಯ ಸೌಂದರ್ಯಾನುಭವಗಳನ್ನು ಸಹಜತೆಯಿಂದ ಛಂದಸ್ಸಿನಲ್ಲಿ ಕರುಣಿಸಿದ ಆದಿಕವಿ, ವರಕವಿ ಪಂಪ.

ಆದರೆ ಪಂಪನಿಗೆ ಅಡ್ಡಲಾಗಿ ಬಿದ್ದಿರುವ ಕಾವ್ಯನಿರ್ಬಂಧವೊಂದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಪಂಪನ ಕಾಲಕ್ಕೆ ಮೊದಲೇ ಕವಿರಾಜಮಾರ್ಗವು ಕಾವ್ಯಮೀಮಾಂಸೆಯನ್ನು ಕುರಿತಿದೆಯಲ್ಲವೆ? ಎಂದರೆ ಕನ್ನಡ ಕಾವ್ಯಕ್ಕೊಂದು ಲಕ್ಷಣಗ್ರಂಥ ಒದಗಿ ಬಂದು ಕಾವ್ಯಮರ್ಯಾದೆಯೆಂಬ ನಯ ಸ್ಥಾಪಿತವಾಗಿತ್ತು. ಪಂಪನು ಕವಿರಾಜಮಾರ್ಗದಲ್ಲಿ ಎಷ್ಟು ದೂರ ನಡೆದಿದ್ದಾನೆ ಎಂಬ ತುಲನೆ ಇನ್ನೂ ನಡೆಯಬೇಕಾಗಿದೆಯಾದರೂ ಆ ಗ್ರಂಥದ ವಸ್ತು ಇವನಿಗೆ ಪರಿಚಯವಾಗಿತ್ತು ಎಂದು ನಂಬಬಹುದಾಗಿದೆ. ಸಂಸ್ಕೃತ ಕಾವ್ಯ ಪರಂಪರೆಯೂ ಅವನಿಗೆ ತಿಳಿದಿತ್ತು. ಹೀಗಾಗಿ ಕಾವ್ಯಮರ್ಯಾದೆಯೆಂಬೊಂದು ಸಂಪ್ರದಾಯ ಪಂಪನ ಬೆನ್ನು ಹತ್ತಿ ಕುಳಿತಿತ್ತು. ಅಂಥ ಸಂಪ್ರದಾಯಗಳನ್ನು ಪಾಲಿಸುವ ಸಂದರ್ಭಗಳಲ್ಲಿ ಪಂಪನು ಕವಿಯ ರಾಜಮಾರ್ಗವನ್ನು ತೊರೆದು ಕವಿಸಾಮಾನ್ಯನು ನಡೆಯುವ ರಸ್ತೆಯನ್ನು ಹೊಕ್ಕಿದ್ದಾನೆ.

“ಕಕುಭಾಶೋಕ ಕದಂಬ ಲುಂಗ ಲವಲೀ ಭೂಜಾರ್ಜುನಾನೋಕಹ ಪ್ರಕರಂ ಪುಷ್ಪಿತ ಹೇಮ ಪಂಕಜ......”(ವಿ.ವಿ. ೫–೮೦) ಇದು ಖಾಂಡವವನದಲ್ಲಿ ಬೆಳೆಯುತ್ತಿದ್ದ ಗಿಡಮರಗಳ ಪಟ್ಟಿ. ಖಾಂಡವವನ ಒಂದು ಕಲ್ಪಿತ ಪ್ರದೇಶವೆಂದೇ ಇಟ್ಟುಕೊಳ್ಳೋಣ. ಅಲ್ಲಿ ನಿಜವಾಗಿಯೂ—ಎಂದರೆ ಸಸ್ಯಶಾಸ್ತ್ರ ದೃಷ್ಟಿಯಿಂದ— ಗಿಡಮರಗಳೆಲ್ಲ ಬೆಳೆಯುತ್ತಿದ್ದವೆ ಎಂಬ ಪ್ರಶ್ನೆ ಏಳುತ್ತದೆ. ಈ ಸಸ್ಯಗಳನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಬಹುದು:

| ಗುಂಪು ೧ | ಗುಂಪು ೨ | ಗುಂಪು ೩ | ಗುಂಪು ೪ |
|---|---|---|---|
| ಕದಂಬ | ಲವಲೀ | ಕಕುಭ | ಭೂಜ |
| ಅಶೋಕ | ಲುಂಗ | ಅರ್ಜುನ | |
| | | ಹೇಮಪಂಕಜ | |

ಮೊದಲನೆ ಗುಂಪಿನ ಸ್ವಾಭಾವಿಕ ನಿವಾಸ ಸರಾಸರಿ ೧೫೦ ಅಂಗುಲಕ್ಕೆ ಮೀರಿದ ಮಳೆಯನು ಕೊಂಡ ಪ್ರದೇಶ; ಎರಡನೆ ಗುಂಪು ಸರಾಸರಿ ೧೦೦ ಅಂಗುಲ ಮಳೆ ಬೀಳುವ ಪ್ರದೇಶದಲ್ಲಿ ಮಾತ್ರ

ಸಾಧಾರಣವಾಗಿ ಬೆಳೆಯುತ್ತದೆ; ೮೦ ಅಂಗುಲಕ್ಕೆ ಹೆಚ್ಚಾಗಿ ೧೦೦ ಅಂಗುಲಕ್ಕೆ ಕಡಿಮೆಯಾಗಿ ಮಳೆ ಬೀಳುವ ಪ್ರದೇಶಗಳಲ್ಲಿ ಮೂರನೆ ಗುಂಪಿನ ಗಿಡಗಳು ಬೆಳೆಯುತ್ತವೆ; ನಾಲ್ಕನೆ ಗುಂಪಿನ ತೌರು ಹಿಮಾಲಯ ಪರ್ವತದಲ್ಲಿ, ಐದಾರು ಸಾವಿರ ಅಡಿ ಎತ್ತರದಲ್ಲಿ. ಮಿಕ್ಕ ಮೂರು ಗುಂಪುಗಳ ಹರವು ೩,೦೦೦ ಅಡಿ ಮಟ್ಟಕ್ಕಿಂತಲೂ ಕೆಳಗಿರುವ ಪ್ರದೇಶಗಳಲ್ಲಿ. "ಸರಳ ತಮಾಳ ತಾಳ ಹರಿಚಂದನ ನಂದನ ಭೂಜ......" (ವಿ.ವಿ. ೫–೫೨). ಇವು ಕಾವ್ಯಧರ್ಮಕ್ಕನುಸಾರವಾಗಿ ಯಮುನಾ ತೀರದ ಗಿಡಮರಗಳು. ಸರಳವೂ ತಮಾಳವೂ ಒಂದೇ ಪ್ರದೇಶದಲ್ಲಿ ಬೆಳೆಯುವು; ತಾಳವೂ ಭೂಜವೂ ಬೇರೆ ಬೇರೆ ಭೂವಾಯು ಸನ್ನಿವೇಶ ಗಳಲ್ಲಿ ಬೆಳೆಯುವಂಥವು. ಹೀಗೆಯೇ "ಫಳ ಕರ್ಪೂರ ಲವಂಗ ಲುಂಗ ಲವಳೀ ಹಿಂತಾಳ ತಾಳೀ ತಮಾಳಳತಾ......" (ವಿ.ವಿ. ೫–೮೬). ವರ್ಣನೆಯೆಂಬ ಸಂಪ್ರದಾಯಕ್ಕೆ ಮರ್ಯಾದೆ ಸಲ್ಲಿಸುವುದಕ್ಕಾಗಿ ಪಂಪನು ಬೇರೆ ಬೇರೆ ಪ್ರದೇಶಗಳ ಗಿಡಮರಗಳನ್ನು ಒಂದೇ ತಾವಿನಲ್ಲಿ ಕುಪ್ಪೆ ಹಾಕಿದ್ದಾನೆ.

ಇಂಥ ಸಂದರ್ಭಗಳು ಕೆಲವನ್ನು ಬಿಟ್ಟರೆ ಪಂಪನ ನೈಜ ಕವಿತಾಸ್ಫೂರ್ತಿ 'ಭೃಂಗದ ಬೆನ್ನೇರಿ' ಸ್ವೇಚ್ಛೆ ಯಾಗಿ ವಿಶಾಲತೆಯಲ್ಲಿ ಹರಡಿದೆ. ಈ ಸವಾರಿಯ ಝೇಂಕಾರ ತರಂಗಗಳ ಸ್ಪರ್ಶದಿಂದ ಗಿಡಮರಗಳಲ್ಲಿ ಚೆಲುವಾದ ಚಿಗುರೊಡೆದಿದೆ, ಕೋಮಲವಾದ ಹೂ ಬಿರಿದಿದೆ, ಇನಿದಾದ ಹಣ್ಣು ತೂಗಿದೆ.

* * * *

ಒಂದೊಂದು ಹೂವಿನ ಪ್ರತ್ಯೇಕವಾದ ಚೆಲುವಿಗೂ ಪರಿಮಳಕ್ಕೂ ಒಂದೇ ಪ್ರಕಾರದಲ್ಲಿ ಮನ ಸೋತಿದ್ದಾನೆ, ಪಂಪ. ಅವನಿಗೆ ಬಹುಪ್ರಿಯವಾದ ಹೂಗಳ ಕೊಂಡಾಟಕ್ಕಾಗಿಯೇ ಬಿಡಿ ಪದ್ಯಗಳನ್ನು ಮೀಸಲಾಗಿಟ್ಟಿದ್ದಾನೆ. ಕೆಲವು ಸಲ ಹೂ-ಹೂಗಳಿಗೆ ಪೈಪೋಟಿಯಿಟ್ಟು ತುಂಟಾಟವಾಡಿದ್ದಾನೆ. ಜಾದಿಹೂವಿನ ಬಾಳುವೆ ಅರೆಗಳಿಗೆಯಲ್ಲಿ ಮುಗಿದು ಹೋಗುತ್ತದೆ. ಆದರೂ ಅದಕ್ಕೆ ವಿಪರೀತ ಅಹಂಕಾರ; ಮಲ್ಲಿಗೆಯ ಬೆಡಗೂ ಹಾಗೆಯೇ ಕ್ಷಣಿಕ; ಸಿಂದುರ ಹಾಗಲ್ಲ, ಅದರದು ಮುಗಿಯದ ತನಿಗಂಪು. ಸೊಡರ ಪಕ್ಕದಲ್ಲಿ ಜಾಜಿ ಕಾಂತಿಹೀನ; ಸಂಪಗೆಗೆ ದುಂಬಿಯನ್ನು ಕಂಡರೆ ದ್ವೇಷ; ತುರುಬಿನಲ್ಲಿ ಮುಡಿದರೆ ಅದಿಮುರ್ತ್ತೆ ಸೊಗಯಿಸದು; ಗೊಜ್ಜಗೆ ಮಸಿಗೆ ಸಮ; ಆದರೆ ಮಲ್ಲಿಗೆ ಮದನನ ಮುಡಿಯಲ್ಲಿ ಕೂಡ ಶೋಭಿಸುತ್ತದೆ, ಅವನ ಕೈಲಿ ಶಹಭಾಸ್ ಎನ್ನಿಸಿಕೊಳ್ಳುತ್ತದೆ.

* * * *

ಬಳ್ಳಿಯಲ್ಲದ ಗಿಡಮರಗಳಿಗೆಲ್ಲ 'ಲತಾ' ಪ್ರಯೋಗ ಮಾಡಿದ್ದಾನೆ, ಪಂಪ. ಸಂಸ್ಕೃತದಲ್ಲಿ ಲತಾ ಎಂದರೆ ಕೋಮಲವಾದ ಎಂಬ ಸಾಮಾನ್ಯಾರ್ಥವಿದೆ, ಎಂದರೆ ತೆಳುವಾಗಿ ಬಳುಕುವ ಬಳ್ಳಿ. ಈ ಅರ್ಥದಲ್ಲಿ ಪಂಪನ ಎಲೆವಳ್ಳಿ (ವಿ.ವಿ. ೪–೨೮; ಆ.ಪು. ೧–೬೭), ಪೂತಮಲ್ಲಿಗೆಯ ಬಳ್ಳಿ (ವಿ.ವಿ. ೭–೮೧) ಮಾಧವೀಲತೆ, ನವಮಾಳಿಕಾಲತೆ (ಆ.ಪು. ೪–೯೨ಗ) ಮೊದಲಾದ ಪದಸಂಯೋಜನೆಗಳು ಉಚಿತವಾಗಿವೆ.

| | |
|---|---|
| ಏಲಲತಾ | ವಿ.ವಿ. ೪–೨೩ |
| ಅಶೋಕೆಗಳ ಮಿಸುಪ ಲತೆ | ವಿ.ವಿ. ೫–೩ |
| ಅಶೋಕೆಗಳ ಲತೆ | ವಿ.ವಿ. ೫–೪; ಆ.ಪು. ೪–೯೨ಗ |
| ಅಶೋಕ ಲತೆ | ವಿ.ವಿ. ೫–೧೩ |
| ತಮಾಳ ಲತಾ | ವಿ.ವಿ. ೫–೮೬; ಆ.ಪು. ೪–೯೨ಗ |
| ಚೂತಲತೆ | ಆ.ಪು. ೪–೯೨ಗ |

ಏಲದ ಗಿಡಕ್ಕೆ ವಿಜ್ಞಾನ ಪರಿಭಾಷೆಯಲ್ಲಿ ಹರ್‌ಬ್ (herb, ರಸಭರಿತವಾದ ಸಣ್ಣಗಿಡ) ಎಂಬ ಮಾತು ಬಳಕೆಯಲ್ಲಿದೆ; ಕ್ಲೈಂಬರ್, ಟ್ವೈನರ್ (climber,twiner) ಮೊದಲಾದ ಮಾತುಗಳು ಬಳ್ಳಿಯನ್ನು (ಲತಾ) ಸೂಚಿಸುತ್ತವೆ. ಏಲದ ಎಲೆಕಾಂಡ ನೆಲದೊಳಗಿನಿಂದ ಒಡೆದು ಗುಂಪಾಗಿ ನೀಟಾಗಿ ಬೆಳೆಯುತ್ತದೆ. ಮೇಲಿನ ಪಟ್ಟಿಯಲ್ಲಿರುವ ಇತರ ಸಸ್ಯಗಳೆಲ್ಲ ಮರಗಳು (trees). ಲತೆಯ ಸಾಮಾನ್ಯ ಅರ್ಥಕ್ಕೆ ಅವು ಒಳಪಡವು. ಪಂಪನಿಗೂ ಇದು ತಿಳಿದ ಸಂಗತಿಯೇ. ಆದರೂ ಲತಾಪ್ರತ್ಯಯವನ್ನು

ಉದ್ದೇಶಪೂರ್ವಕವಾಗಿಯೇ ಅಂಟಿಸಿರುವಂತೆ ತೋರುತ್ತದೆ. ರೆಂಬೆ ಕೊಂಬೆಗಳಿಂದ ಹೊಸತಾಗಿ ಒಡೆದ ಕುಡಿ ಲತೆಯಂತೆಯೇ ಕೋಮಲವಾದ ಗಿಡಭಾಗ. ಲತೆಯಂತೆಯೇ ತೆಳ್ಳಗಿದ್ದು ಬಳುಕಾಡುತ್ತದೆ. ರಸಭರಿತವಾಗಿರುತ್ತದೆ. ಈ ಪರ್ವದಲ್ಲಿರುವ ಟೊಂಗೆಗ್ಗಳಿಗೆ ಕಾವ್ಯಮಯ ದೃಷ್ಟಿಯಿಂದ ಲತಾ ಎಂಬ ವಿಶೇಷಣವನ್ನು ಕೊಟ್ಟು ಅವನಿಗೂ ಹಿಂದಿನ ಸಂಸ್ಕೃತ ಕವಿಮಾರ್ಗವನ್ನೇ ತುಳಿದಿದ್ದಾನೆ. ಎಂದರೆ, ಸಸ್ಯದ ಒಂದು ನಿಲವಿಗೆ ಅನ್ವಯವಾಗಬೇಕಾದ ಪದವನ್ನು (ಲತಾ=climber, twiner) ಮರದ ಎಳೆಟೊಂಗೆ ಭಾಗಕ್ಕೆ ಸಂಕುಚಿತಾರ್ಥದಲ್ಲಿ ಉಪಯೋಗಿಸಿದ್ದಾನೆ. ಚೂತಲತಾ ಎಂದೊಡನೆ ಬಳ್ಳಿಯಂತಿರುವ ಮಾವಿನಮರ ಎಂದು ನೇರವಾದ ಅರ್ಥ ಬರುವುದಾದರೂ–ಸಸ್ಯಶಾಸ್ತ್ರಜ್ಞನಿಗೆ ದಿಗ್ಭ್ರಮೆ ತರುವುದಾದರೂ–ಮಾವಿನಮರದ ಎಳೆಯ ಕುಡಿ ಎಂಬ ಕಾವ್ಯಾರ್ಥದಲ್ಲಿ ಗ್ರಹಿಸಬೇಕು. ಬಳ್ಳಿಯಲ್ಲದ ಸಸ್ಯವನ್ನೂ ಸಸ್ಯಭಾಗವನ್ನೂ ಲತಾ ಎಂದ್ಲು ಸಂಬೋಧಿಸುವುದು ಕವಿಸ್ವಾತಂತ್ರ್ಯ.

* * * *

ಈ ಲೇಖನದಲ್ಲಿ ಪ್ರಸ್ತಾಪಿಸಿರುವ ಕೆಲವು ಗಿಡಮರಗಳನ್ನು ಕುರಿತು ಪ್ರಬುದ್ಧ ಕರ್ಣಾಟಕದ ೫೪ನೇ ಸಂಪುಟದಲ್ಲಿ ಕೆಲವು ವಿವರಗಳನ್ನು ನಿವೇದಿಸಿದ್ದೇನೆ. ಓದುಗರು ಆ ಲೇಖನವನ್ನೂ ಪರಿಶೀಲಿಸು ವರಾದರೆ ಹೆಚ್ಚು ಉಪಯೋಗ ಹೊಂದುತ್ತಾರೆಂಬ ನಂಬಿಕೆ ನನಗಿದೆ. ಅಲ್ಲಲ್ಲಿ 'ದೀಪಿಕೆ' ಎಂಬ ಪದ ಪ್ರಯೋಗ ಡಿ. ಎಲ್. ನರಸಿಂಹಾಚಾರ್ಯರ 'ಪಂಪ ಭಾರತ ದೀಪಿಕೆ'ಯನ್ನು ಕುರಿತದ್ದು. ಆಕರ ಗಳನ್ನು ತಿಳಿಸುವಾಗ ವಿ.ವಿ. (ವಿಕ್ರಮಾರ್ಜುನ ವಿಜಯ), ಆ.ಪು. (ಆದಿಪುರಾಣ) ಎಂಬ ಸಂಕೇತಗಳನ್ನು ಬಳಸಿದ್ದೇನೆ. ರೋಮನ್ ಅಂಕಿಗಳು ಅಧ್ಯಾಯವನ್ನೂ, ಅವನ್ನು ಹಿಂಬಾಲಿಸುವ ಇಂಗ್ಲಿಷ್ ಅಂಕಿಗಳು ಪದ್ಯ ಸಂಖ್ಯೆಯನ್ನೂ ತಿಳಿಸುತ್ತವೆ. ಕೆಲವು ಪದ್ಯ ಸಂಖ್ಯೆಗಳ ಮಗ್ಗುಲಲ್ಲಿ 'ಗ' ಅಕ್ಷರವನ್ನು ಉಪಯೋಗಿಸಿ ದ್ದೇನೆ; ಆಯಾ ಪದ್ಯವನ್ನು ಹಿಂಬಾಲಿಸುವ ಗದ್ಯಭಾಗ ಎಂದು ತಿಳಿಯಬೇಕು.

## ಅರ್ಜುನ ಕುಕಭ

ಆಕರ ವಿ.ವಿ.–V ೮೦

ನಿಘಂಟುಗಳು ಈ ಎರಡು ಪದಗಳೂ ಒಂದೇ ಮರವನ್ನು ಕುರಿತದ್ದು ಎನ್ನುತ್ತವೆ. ಆದರೆ ಪಂಪ ಇವೆರಡು ಪದಗಳನ್ನೂ–ಒಂದೇ ಪದ್ಯದ ಒಂದೇ ಸಾಲಿನಲ್ಲಾದರೂ–ಬೇರೆ ಬೇರೆಯಾಗಿ ಉಲ್ಲೇಖಿಸಿದ್ದಾನೆ.

ಅರ್ಜುನವೃಕ್ಷ ಎಂಬುದು ಟರ್ಮಿನೇಲಿಯ ಅರ್ಜುನ (Terminalia arjuna). ದಕ್ಷಿಣ ಭಾರತದ ಮೈದಾನ ಪ್ರದೇಶಗಳಿಂದ ಹಿಡಿದು ಮೂರು ನಾಲ್ಕು ಸಾವಿರ ಅಡಿ ಎತ್ತರದ ಬೆಟ್ಟ ಪ್ರದೇಶಗಳಲ್ಲೆಲ್ಲ ಬೆಳೆಯುತ್ತದೆ. ಕಕುಭ ಎಂಬುದನ್ನು ಕೆಂಪುಮತ್ತಿ ಎಂದು ಕೆಲವು ಕೋಶಗಳು ನಿರ್ಣ ಯಿಸಿವೆ. ಮತ್ತಿ, ತಾರೆ, ಅಳಲೆ, ಅರ್ಜುನ ಮರಗಳೆಲ್ಲ ಟರ್ಮಿನೇಲಿಯ ಜೀನಸಿಗೆ (genus) ಸೇರಿದ ಬೇರೆ ಬೇರೆ ಸ್ಪೀಷೀಸುಗಳು (species). ಕಕುಭವೂ ಒಂದಾಗಿರಬಹುದು.

ಟರ್ಮಿನೇಲಿಯ ಮರಗಳಲ್ಲಿವೆತ್ತರವಾಗಿ ಬೆಳೆಯುತ್ತವೆ. ಚೌಬೀನೆ ಮರಗಳು. ಮತ್ತಿಯ ಚೌಬೀನೆ ಪ್ರಸಿದ್ಧವಾದದ್ದು. ಈ ಮರಗಳೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಪ್ರಾಚೀನ ಕಾಲದಿಂದಲೂ ಕಾವ್ಯದಲ್ಲೂ ವೈದ್ಯದಲ್ಲೂ ಹೆಸರುಗೊಂಡಿವೆ.

## ಅದಿಮುರ್ತ್ತೆ (Hiptage madablota)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಅದಿಮುರ್ತ್ತೆ, ಮಾಧವೀಲತೆ.

ಆಕರ: ವಿ.ವಿ.–II ೧೨ ; II ೧೨ ಗ. V ೧೪ ಗ ; V ೩೫
ಆ.ಪು.–IV ೫೮ ; XI ೭೩ ಗ ; XI ೧೦೯ ; XI ೧೧೨
(ಪ್ರ.ಕ. ಸಂಪುಟ ೫೪ ಪುಟ ೧೭ ನೋಡಿ)

ಕಾಲಿದಾಸಾದಿ ಕವಿಗಳ ಕಾಲದಿಂದಲೂ ಅತಿಮುಕ್ತಾ, ಅದಿರ್ಗಂದಿ, ಮಾಲತೀ, ಮಾಧವೀ ಮೊದಲಾದ ಹೆಸರುಗಳಿಂದ ಹೆಚ್ಚು ಕಡಿಮೆ ಕವಿಸಮಯವಾಗಿಬಿಟ್ಟಿದೆ. ಅದಿಮುರ್ಗೆತ್ತೆ. ಕವಿಪ್ರಯೋಗ ಈ ಮರಬಳ್ಳಿ(liane)ಯನ್ನು ವಸಂತದೂತಿ ಎನ್ನುತ್ತದೆ (ಆ.ಪು. XI ೧೨). "ಇದಿರೊಳ್ ನನೆದೋಱಿ" ವಸಂತಕಾಲದ ಬರವನ್ನು ಮುನ್ಸೂಚಿಸುತ್ತದೆಯೆಂಬುದು ಕವಿಯ ಭಾವ. ಎಂದರೆ ವನದ ಗಿಡಮರಗಳಲ್ಲೆಲ್ಲ ಅದಿಮುರ್ಗೆತ್ತೆಯೇ ಮೊಟ್ಟಮೊದಲು ಚಿಗುರೊಡೆಯುತ್ತದೆ, ಉಳಿದ ಗಿಡಮರಗಳು ಹಿಂಬಾಲಿಸುತ್ತವೆ. ಈ ಸಂದರ್ಭದಲ್ಲಿ ಇನ್ನೊಂದು ಸ್ವಾರಸ್ಯವನ್ನು ಗಮನಿಸಬೇಕು. ಹೀಗೆ ನನೆದೋಱಿದ ತಾಮ್ರವರ್ಣದ ಚಿಗುರು ಕುಡಿಗಳು ಹಸುರೆಲೆಯ ಹೊದಿಕೆಯಿಂದ ದಿಕ್ಕು ದಿಕ್ಕಿಗೂ ಅಂಬುಗಳಂತೆ ಮೇಲೆದ್ದು ಗಾಳಿಯಲ್ಲಿ ಬಳುಕುತ್ತವೆ. ಎಂದರೆ ವನವಸಂತಕ್ಕೆ ದೂತಿಕೆಯಾಗಿರು ವಂತೆಯೇ ತನ್ನ ಸ್ವಂತ ವಸಂತೋತ್ಕರ್ಷವನ್ನೂ ಪ್ರದರ್ಶಿಸುತ್ತದೆ. ಈ ಕೊಡಿಗಳು ಇನ್ನೂ ಮುಂಚಾಚಿ ಕೊಂಡು ಬೆಳೆದು "ಅಡರ್ದು ಕೊಡರ್ದೆಳಗೊಂಬುಗಳ್ವಿಡಿದು ಮರದಿಂದ ಮರಕ್ಕೆ" (ವಿ.ವಿ. II ೧೨ ಗ) ದಾಂಗುಡಿಯಿಡುತ್ತವೆ. ಇಂಥ ತೆಳುಟೊಂಗೆಗಳ ತುದಿಯಲ್ಲಿ ಹೂಗೊಂಚಲು ಕೊನರುತ್ತದೆ. ಹೀಗೆ ಮಡಲ್ತು ಅಲರ್ದ ಅದಿಮುರ್ಗೆತ್ತೆ "ಪೂತ ಪೊಸಮಲ್ಲಿಗೆ ಕಂಪನವುಂಕು"ತಿತ್ತು (ವಿ.ವಿ. II ೧೨). ಎಂದರೆ ಅದಿಮುರ್ಗೆತ್ತೆಯ ವಾಸನೆ ತೀಕ್ಷ್ಣವಾಗಿದ್ದುದರಿಂದ ಮಲ್ಲಿಗೆಯ ನರುಗಂಪನ್ನು ಅದುಮಿಟ್ಟಿತ್ತು.

ನಂದನವನಗಳಲ್ಲಿ ಅದಿಮುರ್ಗೆತ್ತೆಯ ಚಪ್ಪರಗಳನ್ನು ಬೆಳೆಸುವುದು ಪಂಪನ ಕಾಲದ ಬಳಿಕೆಯಾಗಿತ್ತೆಂದು ತೋರುತ್ತದೆ. (ವಿ.ವಿ. IV ೧೪ ಗ) ಇತರ ಕಾವ್ಯಗಳಲ್ಲೂ ಮಾಧವೀಮಂಟಪಗಳ ಪ್ರಸ್ತಾಪ ಕಾಣುತ್ತೇವೆ.

ಮಾಧವೀ ಒಂದು ಮರಬಳ್ಳಿ. ಬುಡಭಾಗವೂ ಕಾಂಡವೂ ಸಾಧಾರಣವಾದ ಮರದ ಗಾತ್ರವನ್ನೇ ತಾಳುತ್ತದೆ. ಪತ್ರಕಿಸಲಯ ತಾಮ್ರಬಣ್ಣ; ಬಲಿತಾಗ ಹೊಳೆಹೊಳೆಯುವ ಹಸುರು. ಪೂರ್ವ ಪಶ್ಚಿಮ ಘಟ್ಟಗಳಲ್ಲಿ ಬೆಳೆಯುತ್ತದೆ. ಮೈದಾನದಲ್ಲಿ ಬೆಳೆಯಿಸುವುದಕ್ಕೂ ಒಗ್ಗುತ್ತದೆ. ವಾಸನೆಯಿಲ್ಲದೆ ಬಣ್ಣದ ಬೆಡಗನ್ನು ಮಾತ್ರ ಚೆಲ್ಲುವ ಈಗಿನ ಬೊಗನ್‌ವಿಲ್ಲ ಲತಾಮಂಟಪಗಳಿಗೆ ಬದಲಾಗಿ ಮಾಧವೀಮಂಟಪಗಳನ್ನು ಉದ್ಯಾನದಲ್ಲಿ ಬೆಳೆಯಿಸುವ ಸಂಪ್ರದಾಯ ಮುಂದೊಂದು ಕಾಲದಲ್ಲಾದರೂ ಪುನರ್ಭವಿಸಲಿ ಎಂದು ಕನಸು ಕಾಣುತ್ತೇನೆ.

## ಅಲ್ಲ (Zingiber officinale)

ಆಕರ: ವಿ.ವಿ. IV ೮೭ ಗ

ಕ್ರಿ.ಶ. ೧೬ನೆ ಶತಮಾನಕ್ಕೆ ಮೊದಲು–ಮೆಣಸಿನಕಾಯಿ ಭಾರತದಲ್ಲಿ ಕಾಲಿಡುವುದಕ್ಕೆ ಮೊದಲು–ನಮ್ಮ ನಾಲಗೆಗೆ ಖಾರವನ್ನೊದಗಿಸುತ್ತಿದ್ದ ಸಾಂಬಾರ ದಿನಸುಗಳಲ್ಲಿ ಶುಂಠಿ ಒಂದಾಗಿತ್ತು. ಪ್ರಾಚೀನ ಕಾಲದಿಂದಲೂ ಆಯುರ್ವೇದದ ಮೂಲಕ ಪ್ರಸಿದ್ಧಿಯಾಗಿರುವ ಮೂಲಿಕೆ ಇದು.

ಶುಂಠಿ ದಕ್ಷಿಣ ಭಾರತದಲ್ಲಿ ವ್ಯವಸಾಯಕ್ಕೊಳಪಟ್ಟಿದೆಯೇ ಹೊರತು ವನ್ಯವಾಗಿಲ್ಲ. ಶುಂಠಿಯ ಇತರ ಸ್ಪೀಷೀಸುಗಳೇನೋ ನಮ್ಮ ಕಾಡುಗಳಲ್ಲಿ ಸ್ವಾಭಾವಿಕವಾಗಿ ಬೆಳೆಯುತ್ತವೆಯಾದರೂ ಅವುಗಳಲ್ಲಾವುದಕ್ಕೂ ಶುಂಠಿಯ ಕಟುತ್ವವಿಲ್ಲ. ಎರಡನೆ ಮಹಾಯುದ್ಧಕ್ಕೆ ಮೊದಲು ಒಣಶುಂಠಿಯೂ ಅದರಿಂದ ತಯಾರಾದ ಮುರಬ್ಬವೂ ಚೈನಾ ಜಪಾನ್ ದೇಶಗಳಿಂದ ಆಮದಾಗುತ್ತಿತ್ತೆಂಬ ಸಂಗತಿಯನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಈ ಹಿನ್ನೆಲೆಯಿಂದ ಶುಂಠಿಯ ತೌರು ಪ್ರದೇಶವಾವುದು ಎಂಬ ಸಂದೇಹವೇರ್ಪಡುತ್ತದೆ. ಪೆಸಿಫಿಕ್ ಸಾಗರದ ದ್ವೀಪಗಳಲ್ಲಿ ಈ ಗಿಡ ವನ್ಯನೆಲೆಯಲ್ಲಿ ಬೆಳೆಯುತ್ತದೆಯಾದದ್ದರಿಂದ ಅದೇ ತೌರಾಗಿದ್ದಿರಬಹುದೆ ಎಂಬ ಊಹೆ ತೋರಿದೆ. ಬಹು ಕಾಲದ ಹಿಂದೆಯೇ ಅಲ್ಲಿಂದ ಹೊರಟು ಇತರ ದೇಶಗಳಿಗೆ (ದಕ್ಷಿಣ ಭಾರತಕ್ಕೂ) ವಲಸೆ ಬಂದು ನೆಲಸಿರಬಹುದು.

## ಅಶೋಕ (Saraca indica)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಅಶೋಕ, ಅಸುಗೆ

ಆಕರ: ವಿ.ವಿ. II ೨ ಗ; II ೧೨ ಗ; II ೩೯ ಗ; III ೭೫; V ೩; V ೪; V ೧೨; V ೮೦; V ೮೨; XIV ೧೩

ಆ.ಪು. III ೯ ಗ; XI ೭೩ ಗ; XI ೮೫; XI ೯೫ ಗ; XI ೧೦೪ XI ೧೩೦ ಗ; XI ೧೩೨

ಭಾರತೀಯ ಕಾವ್ಯಪರಂಪರೆಯಲ್ಲಿ ಕವಿಸಮಯವಾಗಿದೆ ಅಶೋಕ. ಹಳಗನ್ನಡ ನಡುಗನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ ಎಲ್ಲಾದರೂ ಒಂದು ಕಡೆ ಬಲಾತ್ಕಾರವಾಗಿ ಈ ಮರವನ್ನು ಇರುಕಿಸಿ ಬಿಟ್ಟಿದ್ದಾರೆ; ಕಂಡೋ ಕೇಳಿಯೋ ಅದರ ರಕ್ತಕಿಸಲಯವನ್ನೂ ಹೆಸರಿಸಿದ್ದಾರೆ. ಕಾಲಿದಾಸನಂತೆ ಪಂಪನೂ ಅಶೋಕದೋಹದ ಕ್ರಮವನ್ನು ಸೂಕ್ಷ್ಮವಾಗಿ ವಿವರಿಸಿದ್ದಾನೆ (ಆ.ಪು. XI ೯೫ ಗ; XI ೧೦೪)

ವಸಂತರಾಜನ ಬರವಿಗೆ ಅಲುಗಾಡುವ ಅಶೋಕ ತಳಿರುತೋರಣಗಟ್ಟಿದಂತೆ ಸಿದ್ಧವಾಯಿತು. (ವಿ.ವಿ. II ೧೨ ಗ). ಕೊಳದ ತಡಿಯಲ್ಲಿ ಎಳೆ ಚಿಗುರಿನ ಅಶೋಕದ 'ಮನೆ'ಗಳಿದ್ದವು (ವಿ.ವಿ. V ೪). ಸುಭದ್ರೆಯ ಕಣ್ಣಿಗೆ ಈ ದೃಶ್ಯ ಪ್ರೇಮದ ಉಂಡೆಗಳಂತೆ ಭಾಸವಾಯಿತು (ವಿ.ವಿ. V ೩); ಮರದ ಸುತ್ತ ಓಡಾಡುತ್ತಿದ್ದ ದುಂಬಿಗಳ ಝೇಂಕಾರವನ್ನು ಕೇಳಿ ಅಸೂಯೆಯಿಂದ ಕಿರಿಕಿರಿಯಾದಳು.

ಬಿರಿದ ಹೂಗಳಿಂದ ಕಿಕ್ಕಿರಿದ ಟೊಂಗೆಗಳು ಭಾರದಿಂದ ಬಾಗಿ ಸುಭದ್ರೆಯ ಅಂಗಾಂಗಗಳ ನೆನಪು ತಂದಿತು (ವಿ.ವಿ. V ೧೨). ತೆಂಕಣಗಾಳಿಯಲ್ಲಿ ಬಳುಕುವ ಅಶೋಕವಲ್ಲರಿಯಂತಿದ್ದ ದ್ರೌಪದಿಯ ಪಾಣಿಯನ್ನು ನವಚೂತ ಪಲ್ಲವದಂತಿದ್ದ ಅರ್ಜುನನ ಕೈ ಗ್ರಹಣಮಾಡಿತು (ವಿ.ವಿ. III ೭೫). ರಕ್ತಾಶೋಕ ಪಲ್ಲವದಂತೆ ತೊಳತೊಳಗಿದವಂತೆ ಆಂಧ್ರಸ್ತ್ರೀಯರ ಕುಚಗಳು (ವಿ.ವಿ. II ೩೯ಗ). ರಾಜಕುಮಾರನೊಬ್ಬನ ಪಾಣಿಪಾದಗಳು ಅಶೋಕಪಲ್ಲವದೊಡನೆ ಒಪ್ಪಗೊಂಡವು (ಆ.ಪು. III ೯ ಗ). ಬಂಜೆತನದಿಂದ ವಿರಕ್ತೆಯಾದ ಮಾದ್ರಿಯು ಹೊಸೆದೆಸೆದ ರಕ್ತಾಶೋಕಪಲ್ಲವದಂತೆ ಸೊರಗಿ ಕೊರಗುತ್ತಿದ್ದಳು (ವಿ.ವಿ. II ೨ ಗ).

"......ಬೆಳ್ಗೊಡೆ ರಾಗದ ಪುಂಜದನ್ನವಪ್ಪಸುಗೆಯ ನೀಳ್ದ ಕೆಂದಳಿರೆ..." ಎನ್ನುತ್ತಾನೆ, ಪಂಪ (ವಿ.ವಿ. XIV 13). ಬೆಳ್ಗೊಡೆ ಎಂದರೆ ಶ್ವೇತಚ್ಛತ್ರಿ ಎಂದು 'ದೀಪಿಕೆ' ತಿಳಿಸುತ್ತದೆ. ಈ ಅರ್ಥ ಸಂದರ್ಭಕ್ಕೆ ಒಪ್ಪದು. ಬೆಳಗು + ಒಡೆ = ಬೆಳಗೊಡೆ→ಬೆಳ್ಗೊಡೆ ಎಂದು ಅರ್ಥಯಿಸಿದರೆ 'ಬೆಳಕೊಡೆದಾಗ (ಕಾಣುವ) ಅರುಣ ಬಣ್ಣದ ಕೆಂದಳಿರ ಸಮೂಹ' ಎಂಬ ತಾತ್ಪರ್ಯ ಪಂಪನ ನುಡಿಗಟ್ಟಿನ ಭಾವಾರ್ಥವನ್ನು ಸಮಂಜಸವಾಗಿ ತೋರ್ಪಡಿಸುತ್ತದೆ, "ಪಸರಿಸಿ ಬಂದ ಮಾಮರನೆ". (ಚಿಗುರೊಡೆದ ಮಾವಿನ ಮರ) ಎಂಬ ನುಡಿಗಟ್ಟಿನೊಂದಿಗೂ ಹೊಂದಿಕೊಳ್ಳುತ್ತದೆ. ಅಶೋಕದ ಚಿಗುರೂ ಕೆಂಪು, ಮಾವಿನ ಚಿಗುರೂ ಕೆಂಪು. ಇವನ್ನು ಹಿಂಬಾಲಿಸಿ ದುಂಬಿಹಿಂಡೂ ಮೇಳಯಿಸಿತು. ಬಸಂತರಾಜನ ವನದ ಪ್ರತಿಷ್ಠೆಗೆ ಇನ್ನೇನು ಬೇಕು?

ಸಮುದ್ರ ಮಟ್ಟದಿಂದ ಎರಡು ಮೂರು ಸಾವಿರ ಅಡಿ ಎತ್ತರದಲ್ಲಿರುವ ಕರ್ನಾಟಕದ ಕಾಡುಗಳಲ್ಲಿ ಅಶೋಕ ಸ್ವಾಭಾವಿಕವಾಗಿ ಬೆಳೆಯುತ್ತದೆ. ೨೫–೩೦ ಅಡಿ ಎತ್ತರ ಎದ್ದು ಸುತ್ತಲೂ ಹರಡುವ ಕೊಂಬೆರೆಂಬೆಗಳನ್ನು ತಳೆದು ತುಂಬು ಎಲೆಕೊಡೆಯನ್ನು ಹಿಡಿದಿರುತ್ತದೆ. ಕವಿವಾಣಿಯಂತೆ ವಸಂತದಲ್ಲಿ ಹೊಸತಾಗಿ ಚಿಗುರಿದ ಎಲೆಗಳು ತಾಮ್ರವರ್ಣ; ಕ್ರಮೇಣ ಹಸುರಿಗೆ ತಿರುಗುತ್ತದೆ. ದಟ್ಟವಾದ ಹೂಗುತ್ತಿಗಳ ಬಣ್ಣ ಹವಳವನ್ನೂ ನಾಚಿಸುವಂಥ ಅಚ್ಚಗೆಂಪು. ಈ ಭಂಗಿಯಲ್ಲಿ ಮರ ನಯನಮನೋಹರ. ಅನೇಕ ಕವಿಗಳು ಈ ದೃಶ್ಯವನ್ನು ಕಂಡಿರಲಾರರು; ರಕ್ತಕಿಸಲಯವನ್ನೇ ಹಾಡಿ ಹಾಡಿ ಗಂಟಲು ಒಣಗಿಸಿಕೊಂಡಿದ್ದಾರೆ. ಹೂತಳೆದ ಮರವನ್ನು ನೇರವಾಗಿ ನೋಡಿದ ಸ್ಫೂರ್ತಿವಂತನಾದ ಕವಿಗೆ ಅಶೋಕ ಈಗಲೂ ಹೊಸ ಭಾವನೆಗಳ ತೌರಾಗಿದೆ:

"ವನಲಕ್ಷ್ಮಿ ತೀವಿದಾ ಕತ್ತಲೆಗೆ ಬೇಸತ್ತು
ಸಿರಿಗುರುಳಿರುಳ ಮುಡಿಯ ಕಿಡಿತಾರೆಗಳನಾಯ್ದು,
ರಕ್ತಾರುಣನ ಮಿಂಚೊಳದ್ದಿ ಗೊಂಚಲನೆಯ್ದು
ದೀವಟಿಗೆ ಹಿಡಿರೆಂದು ತರುಹಸ್ತಗಳಿಗಿತ್ತು
ಹೂವಿನ ಹಿಲಾಲುಗಳ ಹೊತ್ತಿಸಿಹರಲ್ಲಲ್ಲಿ
ಜ್ವಲಿಸುತಿದೆ ನೋಡದೊ ಅಶೋಕ ಹೂವೇಷದಲ್ಲಿ!" (ಕುವೆಂಪು)

## ಆಲ (Ficus bengaleusis)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಆಲ, ವಟ.

ಆಕರ: ವಿ.ವಿ. III ೧೦ ಗ; III ೧೨

ಅರಗಿನ ಮನೆಯಿಂದ ತಪ್ಪಿಸಿಕೊಂಡಾದ ಬಳಿಕ ಭೀಮನು ತನ್ನ ಅಣ್ಣತಮ್ಮಂದಿರನ್ನು ಹೆಗಲ ಮೇಲೇರಿಸಿಕೊಂಡು ಹಿಡಿಂಬನ ವನದಲ್ಲಿ ಬೆಳೆಯುತ್ತಿದ್ದ ಆಲದ ಮರದ ಕೆಳಗೆ ಇಳಿಸುತ್ತಾನೆ (ವಿ.ವಿ. III ೧೦). ವೇದಕಾಲದಿಂದ ನಮಗೆ ಪರಿಚಯವಾಗಿರುವ ಮರ ಆಲ. ಇದರ ಮರವೂ ಕಡ್ಡಿಯೂ ಬೆಂಕಿಯನ್ನು ಕಡೆಯುವ ಅರಣಿಗಳಾದವು. ಆಲದ ಮರವೂ ಅದರ ಬಿಳಿಲುಗಳೂ ಮರದ ಶಾಶ್ವತತೆಯೂ ಉಪನಿಷತ್ಕವಿಗಳಿಗೆ ಆತ್ಮಪರಮಾತ್ಮರನ್ನೂ ಸೃಷ್ಟಿಸ್ಥಿತಿಲಯಗಳನ್ನೂ ಕುರಿತ ಯೋಚನಾತರಂಗಗಳನು ಒದಗಿಸಿದವು. ಅಂದಿನ ಮಾರ್ದನಿಯೇ ಇಂದಿಗೂ ಕೇಳಿಬರುತ್ತಿದೆ:

"ತಲೆಯ ಮೇಗಡೆ ಬೇರು, ಕೆಳಗೆ ಕೊಂಬೆಲೆ ಚಿಗುರು
ಬಿಳಿಲೂರೆಗಳ ಲೆಕ್ಕಕಿಲ್ಲ ಕೊನೆಮೊದಲು"
..........................................
"ಒಂದು ಕೊಂಬೆಯು ಬಾಡಲಿನ್ನೊಂದು ಚಿಗುರುವುದು
ಸಂದಿಹುದು ಚಿರನವತೆಯಶ್ವತ್ಥ ಮರಕೆ
ಎಂದೆಂದುಮಂತಿರುವುದೀ ವಿಶ್ವವೃಕ್ಷವದ
ರೊಂದು ರೆಂಬೆಯೊ ನೀನು—ಮಂಕುತಿಮ್ಮ"

"ಊರ್ಧ್ವಮೂಲಮಧಃಶಾಖಾಶ್ವತ್ಥ" ಎಂದರು, ಪ್ರಾಚೀನರು. ಇಲ್ಲಿ ಅಶ್ವತ್ಥವೆಂಬ ಮರ ನಮಗೆ ಇಂದು ಸಾಮಾನ್ಯವಾಗಿ ಪರಿಚಿತವಾಗಿರುವ ಅಶ್ವತ್ಥವಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಸಬೇಕಾಗಿದೆ. ಸಮಯಭಾಷೆ ಗುಹ್ಯವೆಂದು ಒಪ್ಪಿಕೊಳ್ಳಬಹುದಾದರೂ ಆ ಮಾತುಗಳ ಹಿನ್ನೆಲೆಯಲ್ಲಿ ಆಲದ ಮರದ ಪ್ರತಿಮೆ ಇದ್ದಿತೆಂಬುದರಲ್ಲಿ ಸಂದೇಹವಿಲ್ಲ. ರೆಂಬೆಗಳಿಂದ ಬಿಳಿಲು ಬೇರು ಬಿಡುವ ಮರ ಅದು. ಇಂದಿನ ಅಶ್ವತ್ಥ ಇದಕ್ಕೆ ಹೊರಗು. ನಮ್ಮ ಪೂರ್ವಿಕರು ಗಿಡಮರಗಳಲ್ಲಿ ಇಂದಿನ ಜೀನಸ್, ಸ್ಪೀಷೀಸ್‌ಗಳ ವ್ಯವಸ್ಥೆಯನ್ನು ಮಾಡಿದವರಲ್ಲ. ಒಂದೇ ಜಾತಿಯ ಗಿಡವನ್ನು ಬೇರೆ ಬೇರೆ ಹೆಸರುಗಳಿಂದ ಕರೆದವರು ಅವರು; ಹಾಗೆಯೇ ಬೇರೆ ಬೇರೆ ಸ್ಪೀಷೀಸುಗಳನ್ನು ಒಂದೇ ಹೆಸರಿನಿಂದಲೂ ಸಂಬೋಧಿಸಿದರು. ಹೀಗಾಗಿ ವೇದಕಾಲದಲ್ಲಿ ವಟ ಅಶ್ವತ್ಥಗಳೆರಡೂ ಬಿಳಿಲುಬಿಡುವ ಆಲಜಾತಿಗಳಿಗೆ ಅನ್ವಯವಾಗಿರಬೇಕು ಎಂದು ನನ್ನ ಗ್ರಹಿಕೆ.

ನಮ್ಮ ಇಂದಿನ ಅಶ್ವತ್ಥ ವೇದೋಕ್ತವಾದದ್ದೇ ಆದರೂ ಅದಕ್ಕೆ ಹೆಚ್ಚು ಪ್ರಾಶಸ್ತ್ಯ ಉಂಟಾದದ್ದು ಬೌದ್ಧಾಗಮನದಿಂದ. ಗೌತಮನು ಅಶ್ವತ್ಥಮರದಡಿಯಲ್ಲಲ್ಲವೆ ಸಾಕ್ಷಾತ್ಕಾರ ಪಡೆದದ್ದು, ಬುದ್ಧನಾದದ್ದು? ಹೀಗೆ ಬೌದ್ಧಮತದಲ್ಲೂ ಬೋಧಿ ಎಂಬ ಹೆಸರಿನಿಂದ ಅಶ್ವತ್ಥ ಪವಿತ್ರವಾಯಿತು. ಕಾಲಕ್ರಮದಲ್ಲಿ ಹಿಂದೂ–ಬೌದ್ಧಮತದ ಎಳೆಗಳಲ್ಲಿ ಕೆಲವು ಒಂದರೊಡನೊಂದು ಕಲೆತಾಗ ಹಿಂದೂಮತ ದೃಷ್ಟಿಯಲ್ಲಿ ಮರ ಇನ್ನೂ ಪೂಜ್ಯವಾಯಿತು.–ಅಶ್ವತ್ಥಪೂಜೆ, ಅಶ್ವತ್ಥಸೇವೆ ಇತ್ಯಾದಿ.

**ಇರುವಂತಿ** (Jasminum sambac var virupakshi)

ಆಕರ: ಆ.ಪು. XI ೧೧೧

(ಪ್ರ.ಕ. ಸಂಪುಟ ೫೪, ಪುಟ ೪ ನೋಡಿ).

ರತಿಗೂ ಮನ್ಮಥನಿಗೂ ಮುಡಿಯಲು ಯೋಗ್ಯವಾದ ಹೂ ಎನ್ನುತ್ತಾನೆ, ಪಂಪ. ಮಘಮಘಿ ಸುತಲಿರ್ದ ಇರುವಂತಿ ಎಂದು ವಿಶೇಷಿಸಿದ್ದಾನೆ. ಪರಿಹರ. 'ಇರುವಂತಿ' ಎಂದರೆ ಎರಡು ಸುತ್ತಿನ ದಳ ಗಳನ್ನು ಕೊಂಡ ಮಲ್ಲಿಗೆ ಜಾತಿಯ ಹೂ ಇರಬಹುದೇ?– ಎಂದು ಹಿಂದೊಮ್ಮೆ ಪ್ರಶ್ನೆ ಕೇಳಿದ್ದೇನೆ. ಈಗಲೂ ಅದೇ ನೆಲೆಯಲ್ಲಿದ್ದೇನೆ.

**ಉಡಮೊಗ**

ಆಕರ: ವಿ.ವಿ. IV ೭೮

"ಉಡಮೊಗಮೆಂಬ ತಾವರೆಯ ನೀಳ್ದೆಸಟಿಳ್" ಎನ್ನುತ್ತಾನೆ, ಪಂಪ. 'ದೀಪಿಕೆ'ಯಲ್ಲಿ "ಉಡ ಮೊಗಮೆಂಬ–ಬಾಗೆಹೂವಿನಂತಿರುವ ಮುಖವೆಂಬ, ತಾವರೆಯ" ಎಂದಿದೆ.

ಬಾಗೆ ಹೂ ವಿಪರೀತ ಸಣ್ಣದು; ಮುಖದ ಹೋಲಿಕೆಗೆ ತಕ್ಕುದಾದ ರಚನಾವಿಶೇಷವಾಗಲಿ ರೂಪ ಲಾವಣ್ಯವಾಗಲಿ ಅದಕ್ಕಿಲ್ಲ. ನೀಳ್ದ ಎಸಟ್ (ನೀಳವಾದ ದಳಪತ್ರ)ಗಳನ್ನು ಒಳಕೊಂಡ ರಖಮಿನ ತಾವರೆ ಹೂ ಇರಬಹುದು ಎಂದು ನನಗೆ ತೋರುತ್ತದೆ. ಈ ರಖಮಿಗೆ ಉಡಮೊಗ ಎಂಬ ಹೆಸರಿದ್ದಿರ ಬಹುದು.

ಉಡ=ಚಂದ್ರ, ಮೊಗ=ಮುಖ ಎಂದು ಅರ್ಥಯಿಸಬಹುದೆ? ಬಿರಿದ ತಾವರೆಯನ್ನು ಸೂರ್ಯನಿಗೂ ಮುಖಕ್ಕೂ ಹೋಲಿಕೆಯಿಟ್ಟಂತೆಯೇ ಚಂದ್ರಬಿಂಬಕ್ಕೂ ಹೋಲಿಕೆಯಿಟ್ಟಿರಬಹುದೆ?

**ಏಲ** (Eletteria cardamum)

ಆಕರ: ವಿ.ವಿ. IV ೨೩

ಭಾರತದ ಪ್ರಾಚೀನ ಪರಿಮಳ ದ್ರವ್ಯಗಳಲ್ಲಿ ಏಲ (ಏಲಕ್ಕಿ) ಒಂದು; ವೈದ್ಯದಲ್ಲೂ ಬಳಕೆಗೊಂಡಿದೆ. ದಕ್ಷಿಣ ಭಾರತದ ಪಶ್ಚಿಮ ಘಟ್ಟ ಪ್ರದೇಶ ಇದರ ತೌರು. ಇಂದಿನ ಬೆಳೆಯೂ ಅಲ್ಲೇ ಕೇಂದ್ರೀಕೃತವಾಗಿದೆ.

ಏಲದ ಗಿಡವನ್ನು ಶಾಸ್ತ್ರಪ್ರಕಾರ ಹರ್ಬ್ ಎನ್ನುತ್ತೇವೆ. ಕಾವ್ಯಸಂಪ್ರದಾಯದಲ್ಲೂ ಆಡು ಮಾತಿನಲ್ಲೂ ಏಲದ ಬಳ್ಳಿ, ಏಲಕ್ಕಿ ಬಳ್ಳಿ ಎಂಬ ಸಂಬೋಧನೆಯೇ ನಿಂತಿದೆ. ಗಿಡವು ಬಳ್ಳಿಯನ್ನು ಹೋಲದಿದ್ದರೂ ಕಾಯಿಗೊಂಚಲು ಬಳ್ಳಿಯಂತೆಯೇ ಇರುತ್ತದೆ. ಕವಿ ಈ ಕುಡಿಯನ್ನೇ (ಗಿಡವನ್ನಲ್ಲ) ಏಲಲತಾ ಎಂದನೋ ಏನೋ!

**ಕದಂಬ** (Anthoce phalus cadamba)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಕದಂಬ, ಕಡವು

ಆಕರ: ವಿ.ವಿ. V ೮೦; VII ೬೯
ಆ.ಪು. XI ೮೮
(ಪ್ರ.ಕ. ಸಂಪುಟ ೨೩, ಪುಟ ೧೩೧ ನೋಡಿ)

ಶರತ್ಕಾಲದಲ್ಲಿ ಕದಂಬಹೂವಿನ ಪರಿಮಳ ಅಡಗಿತು ಎಂದು ನುಡಿದಿದ್ದಾನೆ, ಪಂಪ (ವಿ.ವಿ. VII ೬೯) ಕದಂಬ ಹೂಬಿಡುವುದು ಮಳೆಗಾಲದಲ್ಲಿ. ಇದನ್ನು ಹಿಂಬಾಲಿಸಿ ಬರುವ ಅಶ್ವೀಜ– ಕಾರ್ತೀಕ ಮಾಸಗಳಲ್ಲಿ ಕಾಯಿಬಲಿಯುತ್ತದೆಯಾದದ್ದರಿಂದ ಪುಷ್ಪಕಾಲಮುಗಿಯಿತು ಎಂದು ಗ್ರಹಿಸ

ಬೇಕು. ವಾರಾಕದಂಬ ಸುರಭಿಸಮೀರ (ಆ.ಪು. XI ೮೮) ತೆಳುವಾದ ನರುಗಂಪಿನಿಂದ ಕೂಡಿದ್ದು, ಮಾದಕೀಯವಾದದ್ದು. ಹೀಗಾಗಿ ಮಮ್ಮಟ ಭಟ್ಟನು "ಪ್ರೌಢಾಃ ಕದಂಬಾನಿಲಾಃ" ಎಂದಿದ್ದಾನೆ.

ಕದಂಬ ಚೆಲುವಾದ ಮರ. ಪಶ್ಚಿಮ ಘಟ್ಟದ ಮಳೆಗಾಡುಗಳಲ್ಲೂ ಎಲೆ ಉದುರುವ ಕಾಡುಗಳಲ್ಲೂ ೪೦–೫೦ ಅಡಿ ಎತ್ತರಕ್ಕೆ ಬೆಳೆಯುತ್ತದೆ. ಹಿಮಾಲಯದ ತಪ್ಪಲಿನಲ್ಲೂ ಹೇರಳವಾಗಿದೆ. ಹೊಳೆಹೊಳೆಯುವ ಹಿರಿಯ ಹಸುರೆಲೆಗಳು ಬ್ಯಾಡ್‌ಮಿಂಟನ್ ಚೆಂಡಿನ ಆಕಾರದ, ಗಾತ್ರದ, ಹೆಚ್ಚು ಕಡಿಮೆ ಅದರದೇ ಬಣ್ಣದ ಒತ್ತಾದ ಹೂಗೊಂಚಲು. ಇದನ್ನು ಕಂಡೇ ನಮ್ಮ ಪೂರ್ವಿಕರು 'ಕದಂಬ ಕೋರಕ ನ್ಯಾಯ'ವನ್ನು ರೂಪಿಸಿದರು. ಹಳೆಯ ತಮಿಳು ಕವಿಗಳು ಹೂಗೊಂಚಲನ್ನು ಆಗ ತಾನೆ ಮೊಟ್ಟೆಯಿಂದ ಹೊರ ಬಂದ ಕೋಳಿಮರಿಗೆ ಔಚಿತ್ಯದಿಂದ ಒಪ್ಪವಿಟ್ಟರು.

ಪ್ರಾಚೀನ ಕಾಲದಿಂದಲೂ ಭಾರತೀಯರಿಗೆ ಪರಿಚಿತವಾಗಿರುವ ಮರ ಕದಂಬ. ನಾಗಾರ್ಜುನ ಕೊಂಡ, ಮಥುರ, ಬಾರ್‌ಹುತ್ ಶಿಲ್ಪಗಳಲ್ಲಿ ಕದಂಬಹೂಗೊಂಚಲು ರೂಪಿತವಾಗಿದೆ. ಪಾರ್ವತಿ ಕದಂಬವನವಾಸಿನಿ. ಶಿವನಿಗೂ ಕೃಷ್ಣನಿಗೂ ಪ್ರಿಯವಾದ ಹೂ ಕದಂಬ. ಕದಂಬಕುಲದ ಲಾಂಛನವೇ ಕದಂಬ.

ಪ್ರಾಚೀನ ತಮಿಳರಿಗೆ ಕದಂಬ ಒಂದು 'ಕಾವಲ್' ಮರವಾಗಿತ್ತು; ಅದು ಊರನ್ನು ರಕ್ಷಿಸುವುದೆಂದು ನಂಬಿದ್ದರು. ಈ ಮರವನ್ನು ಕಡಿಯಕೂಡದೆಂಬ ನಿಯಮವನ್ನು ಪಾಲಿಸಿದರು. ಒಂದು ಸಲ ದಾಳಿಯಿಟ್ಟು ಗೆದ್ದ ಶತ್ರು ಮರವನ್ನು ಕೆಡವಿ ಅದರಿಂದ ರಣಭೇರಿಗಳನ್ನು ನಿರ್ಮಿಸಿದ ಸಂಗತಿ ಹಳೆಯ ತಮಿಳು ಸಾಹಿತ್ಯದಲ್ಲಿ ವರ್ಣಿತವಾಗಿದೆ.

## ಕರ್ಪೂರ (Cinnamomum Camphora)

ಪಂಪನು ಉಪಯೋಗಿಸಿರುವ ಪರ್ಯಾಯಪದಗಳು: ಕರ್ಪೂರ, ಕಪ್ಪುರ.

ಆಕರ: ವಿ.ವಿ. IV ೨೩ ; IV ೫೯ ; V ೬ ಗ ; V ೧೬ ; V ೮೬ ; VII ೭೮ ; XIII ೨ ಗ

ಆ.ಪು. II ೩೨ ಗ ; XI ೧೫೯ ಗ ; XVI ೫೨

(ಪ್ರ.ಕ. ಸಂಪುಟ 54, ಪುಟ 10 ನೋಡಿ)

ಕಾಮಜ್ವರದಿಂದ ಪೀಡಿತಳಾದ ಸುಭದ್ರೆ ಚಂದ್ರಕಾಂತಶಿಲೆಯ ಮಂಟಪವನ್ನು ಸೇರುತ್ತಾಳೆ. ಅಲ್ಲಿ ಹರಡಿದ್ದ ಕರ್ಪೂರದ ಹಳಕುಗಳನ್ನೂ ಇತರ ಪರಿಮಳ ದ್ರವ್ಯಗಳನ್ನೂ ಕಂಡು ಇನ್ನಷ್ಟು ವ್ಯಾಮೋಹ ಪೀಡಿತಳಾಗುತ್ತಾಳೆ (ವಿ.ವಿ.V 6 ಗ). ಅಮೃತದಲ್ಲಿ ನನೆಸಿದ ಕರ್ಪೂರದಿಂದ ಕಡೆದಿದ್ದಂತೆ ಸುಭದ್ರೆ ಅರ್ಜುನನಿಗೆ ಕಂಡಳು (ವಿ.ವಿ. V 16).

ಕರ್ಪೂರ ಸಸ್ಯಜನ್ಯವಾದ ವಸ್ತುವೆಂಬುದು ಪಂಪನಿಗೂ ತಿಳಿದಿತ್ತು. ಸ್ವಾಭಿಮಾನದಿಕಿದ ಮರವನ್ನು ಖಾಂಡವವನದಲ್ಲೂ ಬೆಳೆಸಿಬಿಟ್ಟಿದ್ದಾನೆ! (ವಿ.ವಿ.V 86). ಆದರೆ ಈ ಮರ ಚೈನಾ ಜಪಾನ್ ಫಾರ್ಮೋಸಾಗಳನ್ನು ಬಿಟ್ಟು ಬೇರೆಲ್ಲೂ ಬೇರುಬಿಟ್ಟಿಲ್ಲ. ಭಾರತದಲ್ಲಿ ಈ ಸಸ್ಯಜನ್ಯವಸ್ತು ಮೊದಮೊದಲು ಸುವಾಸನಾದ್ರವ್ಯವಾಗಿಯೂ ವೈದ್ಯಮೂಲಿಕೆಯಾಗಿಯೂ ಉಪಯೋಗ ಪಡೆಯಿತು. ಪಂಪನ ಕಾಲದ ವೇಳೆಗೆ ಮತಾಚರಣೆಗಳಲ್ಲೂ ಮನ್ನಣೆ ಪಡೆದಿತ್ತು.

## ಕಬ್ಬಾಳ

ಆಕರ: ಆ.ಪು. XI ೧೨೭

ನೀವು ತಂಜಾವೂರಿನ ಕಡೆ ಭೇಟಿ ಕೊಟ್ಟಿದ್ದೀರೋ ಇಲ್ಲವೋ? ಅಖಂಡ ಕಾವೇರಿ ಕವಲೊಡೆದು ನದೀಮುಖಜ ಭೂಮಿಯನ್ನು ಸೇರಿದಾಗ ನೀರಿನ ಬದಿಯಲ್ಲಿ Coleus Vetiverioides ಎಂಬ

ಸಣ್ಣ ಗಿಡವೊಂದು ಸ್ವಾಭಾವಿಕವಾಗಿ ಬೆಳೆಯುತ್ತದೆ. ಇದರ ಬೇರು ಸುವಾಸನೆಗೊಂಡದ್ದು. ತಮಿಳಿನಲ್ಲಿ ಕುರುವಿವೇರ್, ಕಿರುವೇರ್, ಕರುವಿಯೇರ್ ಮೊದಲಾದ ಪದಗಳಿಂದ ಪರಿಚಿತವಾಗಿದೆ. ಗಿಡದಿಂದ ಬೇರ್ಪಡಿಸಿದಾಗ ಬೇರು ಹಸಿಯಾಗಿರುವಾಗಲೇ ಕಪ್ಪು ಬಣ್ಣಕ್ಕೆ ತಿರುಗುತ್ತದೆ, ಪರಿಮಳ ಇಮ್ಮಡಿ ಸುತ್ತದೆ. ಮಾಲೆಗಾರರು ಹಾರಗಳಲ್ಲೂ ದಂಡೆಗಳಲ್ಲೂ ಉಪಯೋಗಿಸುತ್ತಾರೆ.ಇದೇ ಕರ್ಬಾಳ ಇರ ಬಹುದೆ?

## ಕಬ್ಬು (Saccharum sp.)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು:

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಕರ್ಬು, ಕರ್ವು, ಇಕ್ಷು.

ಆಕರ: ವಿ.ವಿ. I ೫೬ : I ೧೧೭ ; V ೫ ಗ
ಆ.ಪು. XI ೬೮

ಬೆರಳಿನಿಂದ ತಟ್ಟಿದರೆ ಸಾಕು, ರಸವನ್ನು ಸುರಿಸುತ್ತದೆ! ಇಂಥ ಕಬ್ಬು ಕುರುಜಾಂಗಣ ನಾಡಿನಲ್ಲಿ ಬೆಳೆಯುತ್ತಿತು (ವಿ.ವಿ. I 156). ಈ ರಖಮು ಇಂದಿನ, ಹಳದಿ ಹಸುರು ಕೆಂಪು ಗೀಟುಗಳನ್ನು ಕೊಂಡ 'ಪಟ್ಟಾಪಟ್ಟೆ'ಯಾಗಿರಲಾರದು. 'ಕರಿಯ ಕರ್ವಿನ' (ವಿ.ವಿ. V ೫ ಗ) ಎಂದು ವಿಶೇಷಿಸಿದ್ದಾನೆ, ಪಂಪ. ಕರ್ನಾಟಕದ ಕೆಲವು ಪ್ರದೇಶಗಳಲ್ಲೂ ತಮಿಳುನಾಡಿನಲ್ಲೂ ಕಪ್ಪುಗೆಂಪು ಬಣ್ಣದ ಜಳವೆ ರಖಮು ಬೆಳೆಯಲ್ಲಿದೆ. ಸಕ್ಕರೆಯ ಅಂಶ ಪಟ್ಟಾಪಟ್ಟೆಗಿಂತಲೂ ಸ್ವಲ್ಪ ಗೌಣ. ಆದರೆ ರಸನಿಬಿಡವಾದದ್ದು. ಇದನ್ನು 'ರಸದಾಳಿ' ಎನ್ನುತ್ತಾರೆ. ಪಂಪನು ಹೇಳುವ ಕಬ್ಬು ಇದೇ ಆಗಿರಬಹುದು ಎಂದು ನನ್ನ ಅಭಿಪ್ರಾಯ.

"ಇಕ್ಷುಪುಷ್ಪದವೊಲೆನ್ನಯ ನಿಷ್ಫಲ ಪುಷ್ಪದರ್ಶನಂ" ಎಂದು ಪುತ್ರಾರ್ಥಿನಿಯಾದ ಕುಂತಿ ರೋದಿಸುತ್ತಾಳೆ (ವಿ.ವಿ.I ೧೧೭). ಕಬ್ಬಿನ ಸೂಲಂಗಿ (ಹೂ ಗೊಂಚಲು) ನೋಟಕ್ಕೆ ಚೆಲುವು; ಕೆದರಿದ ಎಲೆಗರಿ ಗುಂಪಿನ ಮಧ್ಯದಿಂದ ಬಿಳಿಗರಿಗುತ್ತಿಯಂತೆ ಮೇಲೆದ್ದು ನಿಂತಿರುತ್ತದೆ. ಹೂ ತೀರ ಸಣ್ಣ; ಭೂತಗನ್ನಡಿಯ ನೆರವಿಲ್ಲದೆ ಅದನ್ನು ಗುರುತಿಸಲಾಗದು. ಸಾಗುವಳಿಗೀಡಾಗಿರುವ ರಖಮು ಗಳಲ್ಲಿ ಸಾಧಾರಣವಾಗಿ ಹೂ ಕಾಯಾಗದು. ಕೆಲವು ವನ್ಯ ರಖಮುಗಳಲ್ಲಿ ಕಾಯಿ ಕೊನರಬಹುದಾದರೂ ಬರಿಗಣ್ಣಿಗೆ ಬೀಳದು. ಅಲ್ಲದೆ ಹೂ–ಸೂಲಂಗಿಗೂ ಕಾಯಿ–ಸೂಲಂಗಿಗೂ ಹೊರನೋಟದ ವ್ಯತ್ಯಾಸ ವೇನೂ ಇಲ್ಲ. ಹೀಗಾಗಿ ಕಬ್ಬಿನ ಸೂಲಂಗಿ ಕಾಯಿಬಿಡದು ಎಂಬ ಸಾಮಾನ್ಯ ನಂಬಿಕೆ ಜನಪ್ರಿಯ ವಾಗಿದೆ, ಕವಿಗೆ ಉಪಮಾನಪ್ರಿಯವಾಗಿದೆ.

## ಕಾಳಾಗರು (Aquillaria agallocha)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಅಗರು, ಕಾಳಾಗರು, ಕೃಷ್ಣಾಗರು

ಆಕರ: ವಿ.ವಿ. IV ೨೩ : IV ೧೦೮ ಗ; VII ೬೮
ಆಪು; II ೩೨; V ೨೩; V ೨೫ ; XI ೧೪೯ ಗ; XVI ೫೨

ಸುಗಂಧ ಧೂಪಕ್ಕಾಗಿ ಬಳಕೆಯಲ್ಲಿದ್ದ ಸಸ್ಯಜನ್ಯ ದ್ರವ್ಯ ಇದು. ತೌರೂರಾದ ಕೊಚಿನ್–ಚೈನ ವನ್ನು ಬಿಟ್ಟು ಹೊರ ಪ್ರದೇಶಗಳಲ್ಲಿ ಬೆಳೆಯದು. ಆದರೆ ಕಾವ್ಯಸ್ವಾತಂತ್ರ್ಯಪ್ರಿಯನಾದ ಪಂಪ ಮರ ವನ್ನು ಮಲಯ ಪರ್ವತದಲ್ಲಿ ಹುಟ್ಟುಹಾಕಿದ್ದಾನೆ. ಕ್ರಿ.ಶ. ೭–೮ನೇ ಶತಮಾನಗಳಿಂದಲೂ ಈ ಸಸ್ಯ ಜನ್ಯವಾದ ವಸ್ತು ಭಾರತದಲ್ಲಿ ಪರಿಚಿತವಾಗಿದೆ.

ಇದೇ ದ್ರವ್ಯವನ್ನು ಅರಬ್ಬೀಯರೂ ಪರ್ಷಿಯನರೂ ಅಯಲೂಗಿ, ಅಯಲೂರ್ಕಿ ಎನ್ನುತ್ತಾರೆ; ಸಂಸ್ಕೃತದ ಅಗರು ಇದೇ ದ್ರವ್ಯವನ್ನು ನಿರ್ದೇಶಿಸುತ್ತದೆ. ಈ ಮಾತೃಕೆಗಳಿಂದಲೇ ಲಾತೀನಿನಲ್ಲಿ ಆಗಲೂಚೆ ಎಂದು ಮಾರ್ಪಡಿಸಿಕೊಳ್ಳಲಾಗಿದೆ.

ಅಕ್ವಿಲೇರಿಯ ಅಗಲೊಚ ೩೦–೪೦ ಅಡಿ ಎತ್ತರ ಬೆಳೆಯುವ ಮರ. ರೆಂಬೆ ಕೊಂಬೆಗಳು ಮುರಿದಾಗ ಸಂಭವಿಸುವ ಗಾಯದಲ್ಲಿ ಒಂದು ಬಗೆಯ ಬೂಷ್ಟು ಹೊಕ್ಕು ಪೊಟರೆ ಬಿಡುತ್ತದೆ; ಕಾಂಡದ ಗರ್ಭವನ್ನು ತಿನ್ನುತ್ತದೆ. ಹೀಗೆ ರೋಗಗ್ರಸ್ತವಾದ ಡೊಗರಿನಿಂದ ರಾಳದಂತೆಗಟ್ಟಿಯಾಗುವ ಸ್ರವ ಸುರಿಯುತ್ತದೆ. ಇದೇ ಅಗರು.

ಮರದಿಂದ ಹೊಸತಾಗಿ ಶೇಖರಿಸಿದ ರಾಳ ಕಪ್ಪು ಬಣ್ಣಕ್ಕಿರುತ್ತದೆ.–ಕಾಳಾಗರು, ಕೃಷ್ಣಾಗರು. ಮಾರಾಟಕ್ಕಿಡುವ ಮುನ್ನ ರಾಳವನ್ನು ಶುದ್ಧಿಮಾಡಿ ಇತರ ಬೆರಕೆ ವಸ್ತುಗಳೊಂದಿಗೆ ಮಿಶ್ರಮಾಡುತ್ತಾರೆ; ಈ ಭಾವನೆಯಿಂದ ಅಗರು ಸ್ವಲ್ಪ ಬಿಳಿ ಬಣ್ಣಕ್ಕೆ ತಿರುಗುತ್ತದೆ. ಇದು ಶ್ವೇತಾಗರು.

## ಕುರವಕ (Ixora ? arborea)

ಆಕರ: ಆ.ಪು. XI ೧೩೦ ಗ

ದೋಹದ ಪ್ರಕರಣದ ಸಂದರ್ಭದಲ್ಲಿ ಕುರವಕವನ್ನು ಉಪಯೋಗಿಸಿಕೊಂಡಿದ್ದಾನೆ, ಪಂಪ. "ಉನ್ನತಕುಚತಟಾಘಾತ" ಪ್ರಯೋಗದಿಂದ ಮರ ಹೂಗೊಳ್ಳುವುದೆಂಬ ಕವಿಸಮಯವನ್ನು ಪ್ರಸ್ತಾಪಿಸಿದ್ದಾನೆ.

ಕರ್ನಾಟಕದ ಕಾಡುಗಳಲ್ಲಿ ಈ ಮರ ಸ್ವಾಭಾವಿಕವಾಗಿ ಬೆಳೆಯುತ್ತದೆ. ೧೫–೨೫ ಅಡಿ ಎತ್ತರ; ಕಾಂಡದ ಮೇಲ್ಭಾಗದಲ್ಲಿ ರೆಂಬೆಕೊಂಬೆಗಳು; ಬಿಳಿ ಇಲ್ಲವೆ ಕೆಂಪು ಮಿಶ್ರವಾದ ಹೂಗುತ್ತಿಗಳು ಟೊಂಗೆಯ ತುದಿಯಿಂದ ಬಿರಿಯುತ್ತವೆ; ದೂರಕ್ಕೆ ಚೆಂಡುಗಳಂತೆ ಕಾಣುತ್ತವೆ. ವಾಸನೆ ದೂರದಿಂದ ಹಿತ, ಹತ್ತಿರದಿಂದ ಮಾದಕೀಯ, ವೆಗಟು.

ಕನ್ನಡದಲ್ಲಿ ಈ ಮರ ಕುರವ, ಗುರುವ, ಗೊರವಿ ಎಂಬ ರೂಪಭೇದಗಳಿಂದಲೂ ಪರಿಚಿತವಾಗಿದೆ; ತಮಿಳಿನಲ್ಲಿ ಕುರಾ, ಕುರಕ್ಕಾ ಎಂದು ಪ್ರಾಪ್ರಾಟುಹೊಂದಿದೆ. ಕಾಂಚೀಪುರದ ಬಳಿ ತಿರುಪರುತ್ತಿಕುನ್ರಮ್ ಎಂಬೊಂದು ಜೈನಗ್ರಾಮವಿದೆ. ಅಲ್ಲಿನ ವರ್ಧಮಾನಸ್ವಾಮಿ ದೇವಾಲಯದ ಪ್ರಾಕಾರದಲ್ಲಿ ಕುರವಕ ಮರವೊಂದು ಬೆಳೆಯುತ್ತಿದೆ. ಬುಡದ ಸುತ್ತ ಕಲ್ಲು ಚಪ್ಪಡಿಯ ಕಟ್ಟೆಯಿದೆ. ಅದರ ಮೇಲೆ ಕೊರೆದಿರುವ ಶಾಸನವೊಂದು (ಕ್ರಿ.ಶ. ೧೧ನೆ ಶತಮಾನದ್ದೆಂದು ಹೇಳುತ್ತಾರೆ) "ಇಕ್ಕುರಾ ತನ್ನಳವಿಲ್ ಕುನ್ರಾದು ಉಯಿರಾದು" ಎಂದು ತಿಳಿಸಿ, ಅದರಡಿಯಲ್ಲಿ ಮೂವರು* ಸವಣಮುನಿಗಳು ದೇಹತ್ಯಾಗ ಮಾಡಿದರು ಎಂದು ತಿಳಿಸುತ್ತದೆ. ಎಂದರೆ, "ಈ ಕುರವಕ ತನ್ನ ಅಳತೆಯಲ್ಲಿ ಕುಗ್ಗುವುದೂ ಇಲ್ಲ, ಏರುವುದೂ ಇಲ್ಲ". ಆಗಲೇ ಹಾಗಿದ್ದ ಮರ ಈಗಲೂ ಹಾಗೆಯೇ ಇದೆ! ಸುಮಾರು ೨೦ ಅಡಿ ಎತ್ತರ, ಕಾಂಡ ಕೊಂಬೆ ರೆಂಬೆಗಳೆಲ್ಲ ಗಂಟು ಗುದುಕು ಪೊಟರೆಗಳಿಂದ ನಿಬಿಡವಾಗಿದೆ; ರೆಂಬೆಕೊಂಬೆಗಳ ಸಂಖ್ಯೆಯೂ ಕಡಮೆ. ಹೊರನೋಟಕ್ಕೆ ಪುರಾತನವಾಗಿಯೇ ಕಾಣುತ್ತದೆ.

## ಕುಂಬಳ

ಆಕರ: ವಿ.ವಿ. XI ೪೮

ನಮ್ಮ ಬಳಕೆಯಲ್ಲಿರುವ ಸೀಗುಂಬಳ ಬೂದುಗುಂಬಳಗಳೆರಡೂ ಪ್ರಾಚೀನ ಭಾರತದಲ್ಲಿ ಬೆಳೆಯುತ್ತಿದ್ದ ಗಿಡಗಳಲ್ಲ. ಸೀಗುಂಬಳ ೧೬ನೇ ಶತಮಾನದಿಂದ ಈಚೆಗೆ ಪೋರ್ಚುಗೀಸರ ಮೂಲಕ ಅಮೆರಿಕದಿಂದ ಆಮದಾದದ್ದು. ಬೂದುಗುಂಬಳ ಅದಕ್ಕೂ ಹಿಂದೆಯೇ ಚೈನಾದೇಶದಿಂದ ಬಂದದ್ದು. ಪಂಪನ ಕುಂಬಳ ಇದೇ ಆಗಿದ್ದ ಪಕ್ಷದಲ್ಲಿ ಅವನ ಕಾಲಕ್ಕೆ ಮುಂಚೆಯೇ ಭಾರತಕ್ಕೆ ಬಂದು ನೆಲೆಸಿರಬೇಕು.

ಕುಂಬ = ಕುಂಭಾಕಾರದ, ಪಳ = ಹಣ್ಣು, ಕುಂಬಪಳ→ಕುಂಬಳ, ಎಂಬ ವ್ಯುತ್ಪತ್ತಿ ಸಾಧುವಾದರೆ ಪಂಪನ ಕಾಲದ ಕುಂಬಳ ಈಗ ಬಳಕೆಯಲ್ಲಿರುವ ಸೋರೆಕಾಯಿ ಆಗಬಹುದು. ಈ ಗಿಡ ಭಾರತದ್ದೇ, ಪ್ರಾಚೀನ ಕಾಲದಿಂದಲೂ ನಮಗೆ ಪರಿಚಿತವಾದದ್ದೇ. ಸೋರೆಕಾಯಿಯೂ ಹೊರಕ್ಕೆ ಆರೋಗ್ಯವಾಗಿ ಕಾಣಬಹುದಾದರೂ ಕೆಲವು ಸಲ ಒಳಗೆ ಕೊಳೆತಿರಬಹುದು.

## ಕೇದಗೆ (Pandanus odorotissimus)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಕೇದಗೆ, ಕೇತಕಿ.

ಆಕರ: ಆಪು. XI ೧೨೦: XI ೧೨೧

(ಪ್ರ.ಕ. ಸಂಪುಟ 54, ಪುಟ ೯ ನೋಡಿ).

ಕನ್ನಡ ಕವಿಗಳು ಸಾಮಾನ್ಯವಾಗಿ ಕೇದಗೆಯನ್ನು ಕಾವ್ಯದೊಳಗೆ ಸಿಕ್ಕಿಸಿ ಬಿಟ್ಟಿರುವವರಾದರೂ ಗಿಡದ ಎಲೆಮುಳ್ಳುಗಳಿಗೆ ಹೆದರಿಕೊಂಡೋ ಏನೋ. ರೂಪವರ್ಣನೆಗೆ ಕೈ ಹಾಕಿಲ್ಲ. ಸಂಸ್ಕೃತ ಕವಿಗಳೂ ಅಷ್ಟೇ. ಸುಭಾಷಿತಗಳನ್ನು ನೆಯ್ದಿಟ್ಟಿರುವವರಾದರೂ ಮುಳ್ಳುಚುಚ್ಚಿಗೆ ಒಳಗಾಗದೆ ತಟಸ್ಥರಾಗಿ ದೂರದಿಂದಲೇ ಗಿಡವನ್ನು ನೋಡಿ ತೃಪ್ತಿಪಟ್ಟುಕೊಂಡಿದ್ದಾರೆ. ಎಲೆಯಂಚಿನ ಗರಗಸದಿಂದ ಗಾಯ ಗೊಂಡರೂ ಪೊದೆಯ ಒಳಗನ್ನು ಹೊಕ್ಕು ಗೆದ್ದುಬಂದ ಧೈರ್ಯಶಾಲಿಗಳೆಂದರೆ ತಮಿಳು ಕವಿಗಳು.

ದುಂಬಿಗೂ ಕೇದಗೆಗೂ ಬಹುಕಾಲದ ನಂಟು. ಪಂಪನೂ ಇದೇ ಪಲ್ಲವಿಯನ್ನು ಹಾಡಿರುವ ನಾದರೂ ನೆರವಲಿನಲ್ಲಿ ತನ್ನ ವ್ಯಕ್ತಿತ್ವವನ್ನು ದುಂಬಿಯ ಆತ್ಮಗತದಲ್ಲಿ ಬೆಳಗಿದ್ದಾನೆ: "ಲೋಕದಲ್ಲಿ ನಾವು ಮುಟ್ಟದ ಹೂ ಇಲ್ಲ. ನಮ್ಮ ರೆಕ್ಕೆ ಗಾಳಿಯ ಸ್ಪರ್ಶದಿಂದಲೇ ಎಸಳುಗಳು ಕುಂದಿಹೋಗುತ್ತವೆ; ಒಂದು ಸಲ ಹೀರಿದರೆ ಕಂಪು ಸೋರಿಹೋಗುತ್ತದೆ. ಆದರೆ ಕೇದಗೆ ಹೂ ಹೀಗಲ್ಲ. ಎಷ್ಟು ಹೀರಿದರೂ ಉಕ್ಕುವ ಸೌರಭ ಮುಗಿಯದು" (ಆ.ಪು. ೧೨೦).

ಎಸಳನ್ನು ಮುಟ್ಟಿದರೆ ಸುವಾಸನೆ ಕೆಟ್ಟುಹೋಗಿ "ಕತ್ತುರಿವಣ್ಣಂ ಮಸಗೆಣೆಯಪ್ಪುದು" (XI ೧೨೧). ಪಂಪನ ಮಾತಿನಲ್ಲಿ ದಿಟವಿರುವುದಾದರೂ ಸ್ವಲ್ಪ ಉತ್ಪ್ರೇಕ್ಷೆಯಿದೆ. ಎಸಳಂ ಮುಪ್ಪು ಮುಟ್ಟಿಲೊಡಂ ಎಂದು ಓದಿಕೊಂಡರೆ ನಿಜಕ್ಕೆ ಹತ್ತಿರವಾಗುತ್ತದೆ. ಎಂದರೆ ಬಾಡಿದ ಎಸಳು ಕಪ್ಪಾಗಿ ಮಸಿಗೂ 'ಕತ್ತುರಿವಣ್ಣೆ'ಗೂ ಸಮನಾಗುತ್ತದೆ.

ಇಲ್ಲಿ ಕತ್ತುರಿವಣ್ಣು ಎಂಬುದಕ್ಕೆ ಪದಶಃ ಅರ್ಥಮಾಡಿ ಕಸ್ತೂರಿಹಣ್ಣು ಎಂದು ಹೇಳಬಹು ದಾದರೂ ಕಾವ್ಯಾರ್ಥಕ್ಕೆ ಹೊಂದದು. ಕತ್ತುರಿ (ಕಸ್ತೂರಿ) ಪ್ರಾಣಿಜನ್ಯವಾದದ್ದು. ಕಸ್ತೂರಿಮೃಗದ ಗಂಟಲ ಭಾಗದಿಂದ ದುಂಡು ಗುಬುಟೊಂದು ಬೆಳೆದು ಕೊಂಗುತ್ತದೆ. ಇದರಲ್ಲಿ ತುಂಬಿರುವ ಕಪ್ಪು ದ್ರವ್ಯವೇ ಕಸ್ತೂರಿ. ಹಣ್ಣಿನ ರೂಪಸಾಮ್ಯದಿಂದ ಈ ಗ್ರಂಥಿಯನ್ನು ಪಂಪನು ಕತ್ತುರಿವಣ್ ಎಂದು ವರ್ಣಿಸಿರುವಂತೆ ಭಾಸವಾಗುತ್ತದೆ.

## ಕೇಸರಿ (Crocus sativus)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಕೇಸರಿ, ಕುಂಕುಮ, ಕಾಶ್ಮೀರ

ಆಕರ: ಆ.ಪು. XI ೧೨೮: XI ೧೫೧; XVI ೫೨

"ತಲೆಗೇಱುವ ಕುಸುಮನಿಚಯಂ ಕಾಶ್ಮೀರಂ" (XI ೧೨೮). ಇಲ್ಲಿ ಸ್ವಲ್ಪ ಕ್ಲಿಷ್ಟತೆಯಿದೆ. ಕೇಸರಿ ಹೂವಿನಂತೆ ರೂಪಗೊಂಡಿದ್ದ ಬಯ್ತಗ(ಬಯ್ತಲೆಯ ಆಭರಣ)ವೇ ತಲೆಯ ಮೇಲೆ ಶೋಭಿಸಿತೋ ಅಥವಾ ಕೇಸರಿಹೂವೇ ಆಭರಣವಾಯಿತೋ ಹೇಳುವುದು ಕಷ್ಟ. ತಾವರೆಕಾಂಡದಿಂದಾದ ಬಳೆ ಗಳನ್ನೂ, ಅದರದೇ ಹೂವಿನಿಂದಾದ ಕರ್ಣಪೂರವನ್ನೂ, ಜಾಜಿಯ ಹೂವಿನಿಂದ ಕೋದ ಸರಿಗೆ ಯನ್ನೂ ಅಲಂಕಾರಾಭರಣಗಳಾಗಿ ಉಪಯೋಗಿಸಿಕೊಂಡ ಆ ಸ್ತ್ರೀಯರು ಕೇಸರಿ ಹೂವನ್ನು ಬೈತಲೆಯಲ್ಲಿ ಸಿಕ್ಕಿಸಿಕೊಂಡರು ಎಂದು ಗ್ರಹಿಸುವುದು ಸ್ವಾಭಾವಿಕವೇ.

ಆದರೆ ಕೇಸರಿ ಕಾಶ್ಮೀರಪ್ರದೇಶವನ್ನು ಬಿಟ್ಟು ಭಾರತದಲ್ಲೆಲ್ಲೂ ಬೆಳೆಯದು. ಹೂವನ್ನೇ ಆಭರಣವನ್ನಾಗಿ ಧರಿಸುವ ಪಕ್ಷಕ್ಕೆ ಅದು ಕಾಶ್ಮೀರ ಸ್ತ್ರೀಯರಿಗೆ ಮಾತ್ರ ಸಾಧ್ಯ. ಪಂಪನ ಭೂಗೋಳವೆಲ್ಲ ದಕ್ಷಿಣ ಭಾರತ; ಕೇಸರಿಹೂ ಇಲ್ಲಿನ ಸ್ತ್ರೀಯರ ಆಭರಣವಾಗಬೇಕಾಗಿದ್ದರೆ ಅದು ಚಿನ್ನದಲ್ಲೋ ಬೆಳ್ಳಿಯಲ್ಲೋ ರೂಪಗೊಂಡಿದ್ದಿರಬೇಕು ಎನಿಸುತ್ತದೆ.

ಪಂಪನ ಕಾಲದಲ್ಲಿ ಕೇಸರಿ ಬಳಕೆಯಲ್ಲಿತ್ತೆಂಬುದಕ್ಕೆ ಆದಿಪುರಾಣದ ಪದ್ಯಗಳು ಸಾಕ್ಷಿಯಾಗಿವೆ. ಎಂದರೆ ೧೦ನೇ ಶತಮಾನದ ವೇಳೆಗಾಗಲೇ ಕಾಶ್ಮೀರಕ್ಕೂ ದಕ್ಷಿಣ ಭಾರತಕ್ಕೂ ವ್ಯಾಪಾರ ವಾಣಿಜ್ಯ ಸಂಬಂಧವೇರ್ಪಟ್ಟು ನೆಲೆಯಾಗಿತ್ತೆಂದು ಧಾರಾಳವಾಗಿ ಊಹಿಸಬಹುದು. ಆ ಪ್ರದೇಶದಿಂದ ಪ್ರತ್ಯ-ಭಿಜ್ಞಾದರ್ಶನ ಸಂಪ್ರದಾಯಸ್ಥರು ದಕ್ಷಿಣ ಭಾರತಕ್ಕೆ ಬಂದು ಚಿದಂಬರದಲ್ಲಿ ನೆಲಸಿದ್ದೂ ಸುಮಾರು ಇದೇ ಕಾಲದಲ್ಲಿ ಎಂಬುದಕ್ಕೆ ಸಾಕ್ಷ್ಯಗಳಿವೆ.

### ಕೊಸಗು (?Pterospermum heyneanum)

ಆಕರ: ವಿ.ವಿ.–IV ೭೫

ಆ.ಪು.–XI ೮೫

ಮೇಲೆ ಕಾಣಿಸಿರುವ ಅನನ್ಯತೆಯನ್ನು ನಿಘಂಟುಗಳಲ್ಲಿ ಕಾಣಬಹುದು. ಆದರೆ ನನಗೆ ಸಮರ್ಪಕ ವಾಗಿಲ್ಲ. ಕೊಸಗಿನ ಕೇಸರಗಳನ್ನು ಅಮೃತದಲ್ಲೂ ಶೃಂಗಾರ ರಸದಲ್ಲೂ ಅದ್ದಿ (ಇನ್ನೂ ಏನೇನನ್ನೋ ಮಾಡಿ) ಬ್ರಹ್ಮನು ಸುಭದ್ರೆಯನ್ನು ಸೃಷ್ಟಿಮಾಡಿದನಂತೆ (ವಿ.ವಿ. IV ೭೫). ಕೊಸಗನ್ನೇ ಕರ್ಣಿಕಾರ ಎಂದೂ ಹೇಳುತ್ತಾರೆ. ಕರ್ಣಿಕಾರದ ಕೇಸರಗಳು ಕುಚ್ಚುಕುಚ್ಚಾಗಿರುತ್ತವೆ. ಆದರೆ ಈ ಸಂದರ್ಭಕ್ಕೆ ಯಾವ ಬಗೆಯಲ್ಲೂ ಹೊಂದಿಕೊಳ್ಳದು.

ಪಂಪನಿಗೆ ನೇರವಾದ ಪರಿಚಯವಿದ್ದ ಮರ ಕೊಸಗು ಎಂದು ನನ್ನ ನಂಬಿಕೆ. ಆದರೆ ಈಗಿನ ಅನನ್ಯತೆ ಸದ್ಯಕ್ಕೆ ತಿಳಿಯದು.

### ಗೊಜ್ಜಗೆ

ಆಕರ: ವಿ.ವಿ.–V ೩೦

ಆಪು.–XI ೧೮೯ ; XI ೧೨೫ ; XI ೧೨೬

(ಪ್ರ.ಕ. ಸಂಪುಟ ೫೪, ಪುಟ ೯ ನೋಡಿ)

ಪಂಪನ ಮಾತುಗಳಿಂದ ಈ ಗಿಡದ ಅನನ್ಯತೆಯನ್ನು ಗುರುತಿಸಲಾಗದು. ಸಾಮಾನ್ಯ ಅಭಿಪ್ರಾಯದ ಪ್ರಕಾರ ಇದು ಸೇವಂತಿಗೆ. ಕಿಟ್ಟೆಲ್ ನಿಘಂಟುವಿನಲ್ಲೂ (ಎರಡನೆ ಆವೃತ್ತಿ) ಹೀಗೆಯೇ ತಿಳಿಸಿದೆ. ಆದರೆ ಸೇವಂತಿಗೆಯೂ ಗೊಜ್ಜಗೆಯೂ ಬೇರೆ ಬೇರೆ ಜೀನಸುಗಳಲ್ಲದಿದ್ದರೂ ಸ್ಪೀಷೀಸುಗಳು ಎಂದು ನನ್ನ ಅಭಿಪ್ರಾಯ (ಸೇವಂತಿಗೆ ನೋಡಿ).

ಗೊಜ್ಜಗೆ ಹೂವಿನ ಬಣ್ಣವನ್ನು ಮಸಿಗೆ ಹೋಲಿಸಿದ್ದಾನೆ, ಪಂಪ (ಆ.ಪು. XI ೧೮೯). ನಾನು ಇನ್ನೊಂದೆಡೆ ತಿಳಿಸಿರುವಂತೆ ಇದು ಕಾಡಿಗೆಗಪ್ಪಾಗಿಯೇ ಇರಬೇಕಾಗಿಲ್ಲ. ಕೆಂಪು, ನೀಲಿ, ಹಸುರು ಬಣ್ಣಗಳು ಬಹುತೀಕ್ಷ್ಣವಾದಾಗ ಆರೂ ಛಾಯೆಗಳೂ ಒಂದು ಬಗೆಯ ಕಪ್ಪಾಗಬಹುದು. ನೀಲ ನೈದಿಲೆಯನ್ನು 'ಕನ್ನೈಯ್ದಿಲು' ಎಂಬ ಪದಸಂಯೋಜನೆಯಿಂದ 'ಕಪ್ಪುಬಣ್ಣದ ನೆಯ್ದಿಲು' ಎಂದು ಕಾವ್ಯದೃಷ್ಟಿಯಿಂದ ಪಂಪನೇ ವರ್ಣಿಸಿದ್ದಾನೆಂಬುದನ್ನೂ ಗಮನದಲ್ಲಿಟ್ಟುಕೊಳ್ಳಬೇಕು. (ವಿ.ವಿ. V ೫೧)

ತರುಬಿನಲ್ಲಿ ಮುಡಿದಾಗ ಗೊಜ್ಜಗೆ ಹೂ 'ಉದಿರ್ದು' ಒಪ್ಪುವುದು ಎಂದಿದ್ದಾನೆ, ಪಂಪ (ಆ.ಪು. XI ೧೨೬). ಈ ಮಾತಿಗೆ 'ಉದುರಿ' ಎಂದು ಅರ್ಥಮಾಡಲಾಗಿದೆ. (ರಾಜರತ್ನಂ, ಜಿ.ಪಿ.: ಶ್ರೀಕವಿಪಂಪ, ಪುಟ ೭೦ ನೋಡಿ). ಮುಡಿದಾಗ ಎಸಳುಗಳು ಉದುರಿ ಹೋದರೆ ಒಪ್ಪವೇನು ಬಂತು? 'ಉದಿರ್ದು' ಎಂದರೆ ಉದಯಿಸಿರ್ದು, ಉದಿಸಿ, ಅರಳಿ ಎಂಬ ಭಾವವನ್ನು ಗ್ರಹಿಸುವುದು ಸಾಧುವಾದರೆ ಗಿಡದ ಅನನ್ಯತೆಯನ್ನು ಗುರುತಿಸುವುದಕ್ಕೆ ಒಂದು ಸುಳಿವು ದೊರಕುತ್ತದೆ.

## ಗೋಧೂಮ

ಆಕರ: ವಿ.ವಿ.–XV ೩೧

ಯವದಂತೆ ಗೋಧಿಯೂ ದಕ್ಷಿಣ ಭಾರತಕ್ಕೆ ಉತ್ತರ ಭಾರತದಿಂದ ಪರಿಚಯವಾದ ಧಾನ್ಯ. ಋಗ್ವೇದದಲ್ಲಿ ಗೋಧಿಯ ಉಲ್ಲೇಖವಿಲ್ಲವಾದರೂ ಇತರ ಸಂಹಿತೆಗಳಲ್ಲಿದೆ. ಯವದಿಂದ ತಯಾರಿಸುತ್ತಿದ್ದ ಅಡುಗೆಗಳೆಲ್ಲವನ್ನೂ ಗೋಧಿಯಿಂದಲೂ ಮಾಡುತ್ತಿದ್ದರು. ಯವಕ್ಕಿಂತಲೂ ಗೋಧಿಯ ಉಪಯೋಗ ದಕ್ಷಿಣ ಭಾರತದಲ್ಲಿ ಬಹುಕಾಲದಿಂದಲೂ ಬೇರೂರಿದೆ.

## (ಚಂದನ) ಶ್ರೀಗಂಧ (Santalum album)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಸಿರಿಕಂಡ, ಚಂದನ, ಹರಿಚಂದನ, ಮಳಯಜ

ಆಕರ: ವಿ.ವಿ.–IV ೨೧ ; IV ೨೨ ; IV ೫೯ ; IV ೭೫ ; V ೫೧ ; V ೩೦ ;
V೫೨ ; V ೬೬ : XIII ೨೧.
ಆ.ಪು.–XVI ೫೨.

ಪಂಪನು ಶ್ರೀಗಂಧದ ಮರವನ್ನು ಪ್ರತ್ಯಕ್ಷವಾಗಿ ಕಂಡಿದ್ದನೋ ಇಲ್ಲವೋ ಎಂಬ ಸಂದೇಹ ತಟ್ಟುತ್ತದೆಯಾದರೂ ಅದರ ಚೌಬೀನೆ ಹೊಮ್ಮುವವಾಸನೆಯನ್ನು ಅನುಭವಿಸಿದ್ದನೆಂಬುದು ಸ್ಪಷ್ಟವಾಗಿದೆ.

ಶ್ರೀಗಂಧವನ್ನು ಮಲಯಪರ್ವತವಾಸಿ ಎಂದು ನಿರ್ದೇಶಿಸಿದ್ದಾನೆ (ವಿ.ವಿ. IV ೨೧ ; IV ೭೫). ಇದು ಸರಿಯೇ. ಮಲಯ ಎಂಬ ಪ್ರದೇಶ ಭಾರತದ ಹೊರಗಿರುವ ಅದೇ ಹೆಸರನ್ನು ಕೊಂಡ ಪರ್ಯಾಯ ದ್ವೀಪವಲ್ಲವೆಂಬುದನ್ನೂ, ಈಗಿನ ಕರ್ನಾಟಕದ ದಕ್ಷಿಣ ಪ್ರದೇಶವನ್ನೂ ಅದನ್ನಂಟಿಕೊಂಡಿರುವ ತಮಿಳು ಕೇರಳ ಪ್ರದೇಶಗಳಲ್ಲಿ ಹಬ್ಬಿರುವ ಘಟ್ಟಪ್ರಾಂತಗಳನ್ನೂ ನಿರ್ದೇಶಿಸುತ್ತದೆಯೆಂಬುದನ್ನೂ ನೆನಪಿನಲ್ಲಿಟ್ಟುಕೊಳ್ಳಬೇಕು. ಈ ಹರವನ್ನು ಬಿಟ್ಟು ಶ್ರೀಗಂಧ ಬೆಳೆಯದು. ಆದರೂ ಕವಿಸ್ವಾತಂತ್ರ್ಯದ ಹಕ್ಕಿನಿಂದ ಪಂಪ ಈ ಮರವನ್ನು ಯಮುನಾನದೀ ತೀರದಲ್ಲೂ ಬೆಳೆಸಿಟ್ಟಿದ್ದಾನೆ !(ವಿ.ವಿ. V ೫೨).

ಕಾಡಾನೆಗಳ ಕೇಳಿಯಲ್ಲಿ ಮುರಿದು ಬಿದ್ದ ಶ್ರೀಗಂಧ ಮರಗಳಿಂದ ಹೊಮ್ಮಿದ ಸುವಾಸನೆಯನ್ನು ಚಂದನರಸ ಎನ್ನುತ್ತಾನೆ (ವಿ.ವಿ. IV ೨೨) ಸೆಕೆಗಾಲದಲ್ಲಿ ಚಂದನಲೇಪ ದೇಹಕ್ಕೆ ತಂಪೀಯುತ್ತದೆ (ವಿ.ವಿ. V ೫), ಚಳಿಗಾಲದಲ್ಲಿ ಚಂದನಧೂಪ ಸುಖೋಷ್ಣತೆಯನ್ನೀಯುತ್ತದೆ (ವಿ.ವಿ. V ೩೦). ಈ ದ್ವಂದ್ವ ಗುಣ ಪಂಪನಿಗೂ ಹಿಂದಿನ ಪ್ರಾಚೀನ ವೈದ್ಯಕೋಶಗಳಲ್ಲೂ ಉಕ್ತವಾಗಿದೆ. ವಕ್ಷಃಸ್ಥಳದ ಮೇಲೆ ಚಂದನ ಲೇಪ ಮಾಡಿಕೊಳ್ಳುವುದು ಪಂಪನ ಕಾಲದ ಸ್ತ್ರೀಯರ ಅಲಂಕಾರಗಳಲ್ಲೊಂದಾಗಿತ್ತು (ವಿ.ವಿ. V ೬೬)

ಶ್ರೀಗಂಧ ಮರದ ಮೇಲೆ ಬೀಸಿದ ಗಾಳಿ ಪೆಂಪು ಪಡೆದಿತ್ತು ಎನ್ನುತ್ತಾನೆ, ಪಂಪ (ವಿ.ವಿ. IV ೨೧). ಪರಿಮಳವಿರುವುದು ಚೌಬೀನೆಯ ಗರ್ಭದಲ್ಲಿ; ಎಲೆ ಹೂಗಳಲ್ಲಲ್ಲ. ಮರದ ಒಂದು ಭಾಗಕ್ಕೆ ಮಾತ್ರ ದತ್ತವಾಗಿರುವ ಗುಣವನ್ನು ಮರಕ್ಕೇ ಇದೆಯೆಂಬ ಹೇಳಿಕೆ ಉತ್ಪ್ರೇಕ್ಷಾಲಂಕಾರವಾಗಬಹುದೇ? (ಬತ್ತ ನೋಡಿ).

ನಮ್ಮ ಪ್ರಾಚೀನರು ಸಾಮಾನ್ಯವಾಗಿ ಎರಡು ಬಗೆಯ ಚಂದನಗಳನ್ನು ಹೆಸರಿಸುತ್ತಾರೆ: ಹರಿಚಂದನ (=ಶ್ವೇತಚಂದನ) ಮತ್ತು ರಕ್ತಚಂದನ. ಮೊದಲನೆಯದು ಶ್ರೀಗಂಧ. ರಕ್ತಚಂದನವೂ ದಕ್ಷಿಣ ಭಾರತದ ಕಾಡುಗಳಲ್ಲೇ ಬೆಳೆಯುತ್ತದೆಯಾದರೂ ಬಹುಕಾಲ ಉಪಯೋಗಕ್ಕೆ ಬಗ್ಗಿರಲಿಲ್ಲ. ಮೊದಮೊದಲು ಕೆತ್ತನೆಯ ಕೆಲಸಕ್ಕಾಗಿ ರಕ್ತಚಂದನ ಚೌಬೀನೆ (Pterocarpus santalinus) ಬಳಕೆಗೆ ಬಂತು; ಈಗಲೂ 'ತಿರುಪತಿ ಗೊಂಬೆ'ಗಳಿಗೆ ಈ ಮರವೇ ಮೂಲ ಸರಕು. ಮರವನ್ನು ಸಾಣೆ ಕಲ್ಲಿನ ಮೇಲೆ ತೇಯ್ದು ಕೆಂಪುಗಂಧವನ್ನು ತೆಗೆಯುವ ಸಂಪ್ರದಾಯ ಯಾವಾಗ ಹುಟ್ಟಿತೆಂದು ತಿಳಿಯಲು

ಆಧಾರಗಳು ದೊರಕಿಲ್ಲ. ದಕ್ಷಿಣ ಭಾರತದಲ್ಲಿ ಶಾಕ್ತ ಮತ್ತು ಸೌರ ಸಂಪ್ರದಾಯಗಳು ಬೇರೂರಿ, ಕೆಂಪು ಹೂ, ಕೆಂಪು ಅಕ್ಷತೆ, ಕೆಂಪು ವಸ್ತ್ರ ಮೊದಲಾದವು ಉಪಯೋಗಕ್ಕೆ ಬಂದ ಸಮಯದಲ್ಲಿ ಕೆಂಪುಗಂಧವೂ ಬಳಕೆಗೆ ಬಂದಿದ್ದಿರಬೇಕು. ರಕ್ತಚಂದನಕ್ಕೆ ಪರಿಮಳವಿಲ್ಲ.

## ಜಾದಿ (Jasminum grandiflorum)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಜಾದಿ, ಜಾಜಿ, (?)ಜಾತಿ

ಆಕರ: ವಿ.ವಿ.–VII ೬೯ ; VII ೭೦

ಆ.ಪು. XI ೬ ; XI ೯ ; XI ೪೯ ; XI ೧೦೯ ; XI ೧೧೩ ;

XI ೧೨೨ ; XII ೧೨

(ಪ್ರ.ಕ. ಸಂಪುಟ 54, ಪುಟ 12 ನೋಡಿ)

ಮಲ್ಲಿಗೆ ಮೊಲ್ಲೆಗಳಂತೆ ಈ ಗಿಡವೂ ಜಾಸ್ಮಿನಮ್ ಜೀನಸಿಗೆ ಸೇರಿದ ಇನ್ನೊಂದು ಸ್ಪೀಷೀಸು. ಕರ್ನಾಟಕದ ಕಾಡುಗಳಲ್ಲಿ ಬೆಳೆಯುತ್ತದೆ. ಬಳ್ಳಿಯಾಗಿ ಬೆಳೆದು ಅಕ್ಕಪಕ್ಕದ ಗಿಡಮರಗಳೊಂದಿಗೆ ನುಲಿ ಹಾಕಿಕೊಳ್ಳುತ್ತದೆ. ಹೂವಿನ ಪರಿಮಳ ಕ್ಷಣಿಕವೆಂಬುದನ್ನು ಪೊಸಜಾದಿ (ಆ.ಪು. XI ೬), ಪೊಸತಲರ್ದ (ಆ.ಪು. IX ೧೧೩) ಅಲರ್ದರಗಳಿಗೆಯ ಜಾದಿ (ಆ.ಪು. XI ೧೨೨) ಮೊದಲಾದ ವಿಶೇಷಣಗಳಿಂದ ಬೆಳಗಲಾಗಿದೆ. ಹೂಬಿರಿಯುವ ಕಾಲ ಬೆಳದಿಂಗಳು ಎಂದೂ ಸೂಚಿತವಾಗಿದೆ (ಆ.ಪು. XI ೯) ಯಾದರೂ ಇರುಳಿನಲ್ಲಿ ಎಂದು ತಿಳಿಯಬೇಕು. ಜಾದಿ ಶರತ್ಕಾಲದಲ್ಲಿ ಹೂ ತಳೆಯುತ್ತದೆ ಎಂಬ ಪಂಪನ ಹೇಳಿಕೆಯನ್ನೂ (ಆ.ಪು. VII ೬೯) ಒಪ್ಪತಕ್ಕದ್ದೇ. ಒಂದು ಗಿಡವನ್ನು ಕುರಿತು ಇಷ್ಟೊಂದು ವಿವರಗಳನ್ನು ಕೊಡುವ ಕವಿಗಳು ತೀರ ವಿರಳ. ಈ ವಿವರಗಳನ್ನು ಕೊಂಡೇ ಗಿಡದ ಅನನ್ಯತೆಯನ್ನು ಸ್ಫುಟವಾಗಿ ತಿಳಿಸಲು ಸಾಧ್ಯವಾಗಿದೆ.

ಹೊಸದಾಗಿ ಅರಳಿದ ಜಾದಿಯ ಕಂಪು ಮೃದುವಾದ ಮಾಧುರ್ಯಗೊಂಡದ್ದು. ""ಜನಮಂ ಸೋಲಿಸುಗುಂ," "ಅನಂಗಾಮೃತ ಸೌಖ್ಯಸಾರ." ಇನ್ನಾವ ಹೂವೂ ಈ ಗುಣವನ್ನು ಪಡೆದಿಲ್ಲ ಎಂದು ಪಂಪನ ಅಭಿಪ್ರಾಯ (ಆ.ಪು. XI ೧೧೩).

"ಸೊಡರ ಬೆಳಗಿನೊಳ್ ಕೊರಗುವ ಜಾಜಿ" ಎಂದ ಪಂಪ (ಆ.ಪು. XI ೧೦೯). ಈ ಸಂದರ್ಭದಲ್ಲಿ ಸೊಡರ ಕಾಂತಿಯೇ ಹೆಚ್ಚು, ಜಾದಿಯು ಕಾಂತಿಹೀನ ಎಂಬ ಟೀಕೆ ಸಲ್ಲದು. ಚಂದ್ರಶೀತಲ ಕಿರಣದಲ್ಲಿ ಜಾಜಿ ಅರಳುತ್ತದೆಯೆಂದು ಪಂಪನೇ ನಮಗೆ ತಿಳಿಸಿದ್ದಾನೆ. ಎಂದರೆ 'ಪೊಸ' ಜಾದಿಯ ಕ್ಷಣಿಕ ಕಂಪನ್ನು ಅನುಭವಿಸಬೇಕಾದರೆ ತಣುವು ವಾತಾವರಣ ಬೇಕು. ಬಿಸಿಯೇರಿದ ವಾತಾವರಣದಲ್ಲಿ–ಸೊಡರ ಮಗ್ಗುಲಲ್ಲಿ–ಕಂಪು ನಾಶವಾಗುತ್ತದೆ, ಹೂ ಮಾಸುತ್ತದೆ. ಬೆಂಗಳೂರು ಹವದಲ್ಲಿ ಬೆಳೆದ ಜಾಜಿಗಿರುವ ಪರಿಮಳ ಸಮುದ್ರಮಟ್ಟದಲ್ಲಿ ಬೆಳೆದ ಜಾಜಿಗಿಲ್ಲವೆಂಬುದು ರಸಿಕರ ಅನುಭವ.

## ತಮಾಲ (Cinnamomum tamala)

ಆಕರ: ವಿ.ವಿ. I ೧೨೫ ; V ೫೨ ; V ೮೬ ; VII ೭೩

ಆ.ಪು. XI ೬೦

ತಮಾಲ (ತಮಾಳ) ಎಲೆಯ ಬಣ್ಣ ಕಪ್ಪುಛಾಯೆಗೊಂಡ ಹಸುರು ಎಂದು ಅನೇಕ ಸಂಸ್ಕೃತ ಕಾವ್ಯಗಳಿಂದ ತಿಳಿದು ಬರುತ್ತದೆ (ಉದಾ: ಶ್ಯಾಮಸ್ತಮಾಲ ದ್ರುಮೈಃ–ಗೀತ ಗೋವಿಂದ). ಪಂಪನು ಕುಂತಿಯ ಚೂಚುಕವನ್ನು ಒಪ್ಪವಿಡುವ ಸಂದರ್ಭದಲ್ಲಿ ಕಪ್ಪುಬಣ್ಣವನ್ನು ಪ್ರತಿಮೆಯಾಗಿಟ್ಟುಕೊಂಡಿರುವಂತಿದೆ. ಹೀಗಿರುವಾಗ ತಮಾಳವನು ಹೊಂಗೆಯ ಚಿಗುರು ಎಂದು ಅರ್ಥಯಿಸುವುದರಲ್ಲಿ ('ದೀಪಿಕೆ') ಸಾಧುತ್ವವಿಲ್ಲ.

ಯಮುನಾ ತೀರದಲ್ಲೂ ನಂದನವನದಲ್ಲೂ ತಮಾಲ ವೃಕ್ಷ ಬೆಳೆಯುತ್ತಿತ್ತು. ಪಂಪನ ಪ್ರಕಾರ (ವಿ.ವಿ. V ೫೨ ; V ೮೬). ನಿಜವಾದ ಹಿಮಾಲಯದ ತಪ್ಪಲು ಪ್ರದೇಶದಲ್ಲೂ ಅಸ್ಸಾಂನ ಬೆಟ್ಟಕಾಡುಗಳಲ್ಲೂ ಸ್ವಾಭಾವಿಕವಾಗಿ ಬೆಳೆಯುತ್ತದೆ. ಸಣ್ಣಮರ, ದಟ್ಟವಾದ ಎಲೆಹೊದಿಕೆ. ಎಲೆಯ ಮೇಲೆ (ಹಿಂಭಾಗ) ಮೂರು ನಾಮದಂತೆ ವಿನ್ಯಾಸಗೊಂಡಿರುವ ಉಬ್ಬುನರಗಳು. ಪ್ರಾಚೀನ ಕಾಲದಿಂದಲೂ ಎಲೆ ಸಾಂಬಾರದಿನಸಾಗಿ ಪ್ರಸಿದ್ಧಿಹೊಂದಿದೆ. ದಕ್ಷಿಣ ಭಾರತಕ್ಕೆ ಕಡಲು ವ್ಯಾಪಾರದ ಮೂಲಕ ಕ್ರಿಸ್ತ ಶಕದ ಆದಿಶತಮಾನಗಳಲ್ಲಿ ಸರಬರಾಜಾಗುತ್ತಿತ್ತು; ಮೆಡಿಟರೇನಿಯನ್ ರಾಷ್ಟ್ರಗಳಿಗೂ ರವಾನೆಯಾಗುತ್ತಿತ್ತು.

ಪಶ್ಚಿಮ ಘಟ್ಟಗಳಲ್ಲಿ ಸಿನ್ನಮೊಮಿನ ಬೇರೆ ಸ್ಪೀಷೀಸುಗಳಿಗೆ ಸೇರಿದ ಗಿಡಗಳು ಬೆಳೆಯುತ್ತವೆ. ತಮಾಲ ಪತ್ರಕ್ಕೆ ಬದಲಿಗೆ ಮಾಲಾಗಿ ಈ ಎಲೆಗಳು ಮಾರುಕಟ್ಟೆಗೆ ಬರುತ್ತವೆ. ನಮ್ಮ ಜನ ಇದನ್ನೇ 'ಲವಂಗ ಪತ್ರೆ' 'ಜಾಕಾಯಿ ಪತ್ರೆ' ಎಂದೆಲ್ಲ ಹೇಳಿಕೊಂಡು ಉಪಯೋಗಿಸುತ್ತಾರೆ (ಲವಂಗಕ್ಕೂ ತಮಾಲಕ್ಕೂ ಯಾವ ಸಂಬಂಧವೂ ಇಲ್ಲ). ಸಸ್ಯಾಹಾರಿಗಳಿಗಿಂತಲೂ ಮಾಂಸಾಹಾರಿಗಳಿಗೆ ತಮಾಲ ವಾಸನೆ ಪ್ರಿಯ.

## ತಾವರೆ (Nelumbium Speciosum)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ತಾವರೆ, ಕೆಂದಾವರೆ, ಅಂಭೋಜ, ಅಬ್ಜ, ಮೃಣಾಳ, ವನಜ, ಕೋಕದ, ಅಂಬುಜ, ಪದ್ಮ, ಕಮಳ, ಕಮಲ, ನೀರೇಜ, ಶತಪತ್ರ, ಪಂಕಜ, ಅಂಬೋರುಹ.

ಆಕರ: ವಿ.ವಿ. I ೪೦; I ೧೧೫; II ೧೬; II ೧೯ ಗ; II ೨೫; II ೩೯ ಗ; II ೭೭ ಗ; III ೧೧ ಗ; III ೧೮; III ೩೩ ಗ; III ೩೯; IV ೪೬; IV ೪೮ ಗ; IV ೫೯; IV ೭೨; IV; ೭೫; IV ೧೦೭; V ೫ ಗ; V ೧೦; V ೧೬; V ೩೪; V ೫೬; V ೬೩; V ೮೦; X ೫೧

ಆ.ಪು. I ೬

(ಪ್ರ.ಕ. ಸಂಪುಟ 54, ಪುಟ 8 ನೋಡಿ)

ನೆಯ್ದಿಲಿನಂತೆ ತಾವರೆಯೂ ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೆ, ರಾಜಸ್ಥಾನದಿಂದ ಬಂಗಾಳದ ವರೆಗೆ, ಮೈದಾನ ಪ್ರದೇಶಗಳಲ್ಲೆಲ್ಲ ಬೆಳೆಯುತ್ತದೆ (ಭೂಮಿಯ ಉಷ್ಣವಲಯ ಪ್ರದೇಶಗಳಲ್ಲೆಲ್ಲ ಬೇರೆ ಬೇರೆ ಸ್ಪೀಷೀಸುಗಳು ಬೆಳೆಯುತ್ತವೆ. ಪ್ರಾಚೀನ ಕಾಲದಿಂದ ಭಾರತೀಯರಿಗೆ ಭಾವೋತ್ಕರ್ಷವೀಯುತ್ತಿರುವ ಗಿಡ ಇದು.

ಪಂಪನು ಎರಡು ಬಣ್ಣಗಳ ತಾವರೆ ಹೂಗಳನ್ನು ನಿರ್ದೇಶಿಸುತ್ತಾನೆ: ಬಿಳಿದಾವರೆ (ವಿ.ವಿ. I ೪೦; V ೫ ಗ) ಮತ್ತು ಕೆಂದಾವರೆ (ವಿ.ವಿ. II ೩೯ ಗ) ಈ ಎರಡು ಬಣ್ಣಗಳ ಹೂ ತಳೆಯುವ ಗಿಡಗಳು ಬೇರೆಯಾದರೂ ಒಂದೇ ಸ್ಪೀಷೀಸಿಗೆ ಸೇರಿದವು.

ಪಂಪನು ಲಕ್ಷ್ಮಿಯನ್ನು ಬಿಳಿದಾವರೆಯಲ್ಲಿ ನಿಲ್ಲಿಸಿದ್ದಾನೆ. ಅದರ ಮಗ್ಗುಲಲ್ಲಿ ಜಾಕವ್ವೆಯನ್ನು ನಿಲ್ಲಿಸಿ ಲಕ್ಷ್ಮಿಯು ಕಾಂತಿಹೀನ ಎನ್ನುತ್ತಾನೆ (ವಿ.ವಿ. I ೪೦). ಸಂಜೆಯ ಅರುಣಾಕಾಶ ಕೆಂದಾವರೆಯ ಹೂ ನೀರನ್ನುಂಡದ್ದರಿಂದ ಉಂಟಾಯಿತು ಎನ್ನುತ್ತಾನೆ (ವಿ.ವಿ. IV ೪೬). ಅಸ್ತಮಿಸುತ್ತಿರುವ ಸೂರ್ಯನೆದುರು ಅರಳಿದ್ದ ತಾವರೆ ಹೂ ಮುಚ್ಚಿಕೊಳ್ಳುವುದನ್ನು "ಆದಿತ್ಯಂಗೆ ಕೆಯ್ಯಂ ಮುಗಿವಂತೆ ಮುಗಿದು" ಎಂದು ಕಾವ್ಯವಾಣಿಯಲ್ಲಿ ಚಿತ್ರಿಸಿದ್ದಾನೆ (ವಿ.ವಿ. IV ೪೮ ಗ). ದುರ್ಯೋಧನನ ಮುಖ ಅವನ ತುರುಬಿಗಿಂತಲೂ ಕಿರಿಯದಾಯಿತು ಎಂಬ ಹೇಳಿಕೆಗೆ ಪುಷ್ಟಿದೊರಕುವಂತೆ ಭೀಷ್ಮದ್ರೋಣಾದಿಗಳ ಮುಖ ಅರಳಿದ ತಾವರೆಗಿಂತಲೂ ಹಿರಿಯದಾಯಿತು ಎನ್ನುತ್ತಾನೆ (ವಿ.ವಿ. II ೭೭ ಗ)

ತಾವರೆ ಹೂವಿನಿಂದ ಅನುವಾದ ಸರಿಗೆ ಕಂಕಣಗಳಿಂದಲೂ ಕಟಿಸೂತ್ರದಿಂದಲೂ ಅಲಂಕಾರ ಗೊಂಡಿದ್ದರಂತೆ ಸ್ತ್ರೀಯರು (ವಿ.ವಿ. V ೫ ಗ; V ೧೬). ಪಾಂಡುವು ಸಾಯುವ ಮುನ್ನ ಮಾದ್ರಿಯನ್ನಪ್ಪಿ ಕೊಂಡಾಗ ತಾವರೆದಂಟಿನಂತಿದ್ದ (ಕ್ಷೀಣವಾಗಿದ್ದ) ಅವನ ಬಾಹುಪಾಶಗಳು ಯಮಪಾಶಗಳಾದ ವಂತೆ (ವಿ.ವಿ. II ೧೯ ಗ). ತಾವರೆ ಕಾಂಡವನ್ನು ಸೀಳಿದ ಹಾಗೆ ಭೀಮನು ರಾಕ್ಷಸನನ್ನು ಸೀಳಿದನಂತೆ (ವಿ.ವಿ. III ೧೮). ತಾವರೆದಂಟಿನ ನಾರಿನಿಂದ ತೋರಮಲ್ಲಿಗೆಯ ಬಿರಿಮುಗುಳನ್ನು ಸರಿಗೆಯಂತೆ ಪೋಣಿಸಿದರು (ವಿ.ವಿ V ೫ ಗ)

ಬಿರಿದ ತಾವರೆಯನ್ನು ಚೆಲುವಾದ ಮುಖಕ್ಕೆ ಒಪ್ಪವಿಡುವ ಸಂಪ್ರದಾಯವನ್ನು ಪಂಪನೂ ಅನುಸರಿಸಿದ್ದಾನೆ (ಮುಖಾಬ್ಜ, ವಿ.ವಿ. II ೬೩; ಮುಖಾಂಬುಜ, ವಿ.ವಿ. IV ೧೦೭; ಅಂಬುಜಾಕ್ಷಿ ವಿ.ವಿ. IV ೭೨ ಇತ್ಯಾದಿ). ಕಮಲದ ಹೂವನ್ನು ಉಪಮಾನವಾಗಿ ಆರಿಸಿಕೊಂಡಂತೆ ಅದರ ದಳ ವನ್ನು ಕಣ್ಣಿಗೂ ಬೆರಳಿಗೂ ಹೋಲಿಕೆ ತರುವುದೂ ಸಾಮಾನ್ಯ ಕವಿಸಮಯವೇ.

## ತಾಳ

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ತಾಳ, ತಾಳೀ

ಆಕರ: ವಿ.ವಿ. V ೫೨; V ೮೬

ಆ.ಪು. XI ೬೦

ಪಂಪನು ತಾಳ ತಾಳೀ ಪದಗಳನ್ನು ಇತರ ಸುಗಂಧದ್ರವ್ಯಗಳ ಸಂದಿನಲ್ಲಿ ಇರುಕಿಸಿದ್ದಾನೆ. ಹೀಗಾಗಿ ತಾಳ ಎಂಬುದು ತಾಳೆ (ತಾಡ, ತಾಟ) ವೃಕ್ಷವಾಗಿರಲಾರದೆಂದೂ ತಾಳೆ (ಕೇದಿಗೆ) ಇರ ಬಹುದೆಂದೂ ಸಂಶಯ ಹುಟ್ಟುತ್ತದೆ (ಕೇತಕಿ ನೋಡಿ).

## ತಾಂಬೂಲ, ಎಲೆ, ಅಡಕೆ

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: 1. ತಾಂಬೂಲ, ತಂಬುಲ, ತಾಂಬೂಳ. 2. ಎಲೆ, ಎಲೆವಳ್ಳಿ, ನಾಗ, ನಾಗಜಾಲ (Piper betel) 3. ಅಡಕೆ, ಕೌಂಗು, ಪೂಗ (Areca catechu)

ಆಕರ: 1. ತಾಂಬೂಲ

ವಿ.ವಿ. III ೧೮ ಗ; IV ೩೭; IV ೪೩; IV ೧೦೭
ಆ.ಪು. XI ೨೭ ಗ; III ೯೦ ಗ
2. ಎಲೆ:
ವಿ.ವಿ. IV ೧೭; IV ೨೮
ಆ.ಪು. I ೬೭; XI ೬೮; XIII ೧೧
3. ಅಡಕೆ:
ವಿ.ವಿ. II ೩೯ ಗ; II ೪೬; III ೫೫
ಆ.ಪು. I ೬೭; XIII ೧೧

ಪಂಪನಿಗೆ ಪ್ರಿಯವಾದ ಬನವಾಸಿಯಲ್ಲಿ ಬೆಳೆಯುತ್ತಿದ್ದ ಗಿಡಗಳಲ್ಲಿ ಎಲೆಯೂ ಒಂದು (ವಿ.ವಿ. IV ೨೮). ಕಟ್ಟಿಲಿಸುತ್ತಿದ್ದ ಎಲೆವಳ್ಳಿ ಎನ್ನುತ್ತಾನೆ (ಆ.ಪು. I ೬೭). ಬಳ್ಳಿ ಸಮೂಹ (ತೋಟ?) ವನ್ನು ನಾಗಜಾಲ ಎನ್ನುತ್ತಾನೆ (ವಿ.ವಿ. IV ೧೭). ತಾಂಬೂಲದೊಡನೆ ಅಗಿಯುವ ಎಲೆಗೆ ದ್ರಾವಿಡ ಭಾಷೆಗಳಲ್ಲಿ ಪ್ರತ್ಯೇಕವಾದ ಹೆಸರಿಲ್ಲ; ಔತ್ತರೇಯ ನುಡಿಗಳಲ್ಲೂ ಪಾನ್(=ಎಲೆ, ಪರ್ಣ) ಎಂಬ ಸಾಮಾನ್ಯ ಪದವೇ ಬಳಕೆಯಲ್ಲಿದೆ. ಭಾರತ ಪೂರ ಉಪಯೋಗದಲ್ಲಿರುವ ತಾಂಬೂಲದ ಎಲೆಗೆ

ಪ್ರತ್ಯೇಕವಾದೊಂದು ಹೆಸರಿಲ್ಲದಿರುವುದರಿಂದ ಸೋಜಿಗಪಡಬೇಕಾಗಿಲ್ಲ. ಕ್ರಿಸ್ತಶಕದ ಮೊದಲ ಶತಮಾನಗಳಲ್ಲಿ ಸುವರ್ಣ ದ್ವೀಪಗಳಿಂದ (ಜಾವಾ ಸುಮಾತ್ರ ಬೋರ್ನಿಯೋ ದ್ವೀಪಸಮೂಹ) ಭಾರತಕ್ಕೆ ಆಮದಾಗಿ ಬಂದ 'ಎಲೆ' ಎಲೆಯೆಂಬ ಹೆಸರನ್ನೇ ಉಳಿಸಿಕೊಂಡಿದೆ. ನಾಗವಲ್ಲಿ ಎಂಬ ಹೆಸರು ಈಚಿನ ಸಂಸ್ಕೃತ ಪಂಡಿತರ ನಾಮಕರಣ.

ಅಡಕೆ ಮರವೂ ಮೂಲತಃ ನಮ್ಮದಲ್ಲ. ಎಲೆ ಆಗಮಿಸಿದ ಕಾಲದಲ್ಲೇ ಇದೂ ಭಾರತವನ್ನು ಸೇರಿರಬೇಕು. ಅಡಕೆಯ ವನ್ಯ ಬೆಳೆ ಭಾರತದಲ್ಲೆಲ್ಲೂ ಇಲ್ಲ. ಅಡಕೆ ತೋಟಗಳೆಲ್ಲ ಮಾನವಕೃತ. ಪಂಪನಿಗೆ ಅಡಕೆ ಒಂದೆರಡು ಸಂದರ್ಭಗಳಲ್ಲಿ "ಬಲವಂತಾಲಂಕಾರ"ವಾಗಿದೆ; ಗಿಡಮರಗಳ ಕ್ಯಾಟಲಾಗಿನಲ್ಲಿ ಇದು ದಾಖಲಾಗಿದೆ (ವಿ.ವಿ. III ೫೫: ಆ.ಪು. XIII ೧೧). ಇನ್ನೊಂದೆಡೆ ಹಣ್ಣಾದ ಹೊಂಬಾಳೆಯಿಂದ ಬಳುಕುವ ಕೌಂಗು ಎಂದು ನಮ್ಮ ಗಮನವನ್ನು ಸೆಳೆದಿದ್ದಾನೆ. (ಆ.ಪು. I ೬೭)

ಅರ್ಜುನನ ಕೊರಳನ್ನು ಎಳಗೌಂಗಿಗೆ ಒಪ್ಪವಿಟ್ಟಿದ್ದಾನೆ (ವಿ.ವಿ. II ೬೯ ಗ). ಅಡಕೆಮರದ ವರ್ತುಲಸ್ತಂಭಾಕೃತಿಯ (Cylindrical) ಕಾಂಡದಂತೆ ಕತ್ತುಳ್ಳವನು ಎಂದು ತಿಳಿಯಬೇಕು; ಆ ಕಾಂಡದ ಮೇಲೆ ಎಲೆಯುದುರಿದ ಅಡ್ಡಗೆರೆಗಳಿರುತ್ತವೆಯಲ್ಲವೆ? ಕತ್ತನ್ನು ಅಡ್ಡವಾಗಿ ಹಾದು ಹೋಗುವ ಸುಕ್ಕುಗಳು ಎಲೆ–ಗುರುತುಗಳಿಗೆ ಒಪ್ಪಗೊಳ್ಳುತ್ತವೆಯೆಂದು ಹೇಳಬಹುದು.

"ಈಗಳೊಂದಡಕೆಯುಮಿಲ್ಲ" (ವಿ.ವಿ. 46) ಎಂದು ಪರಶುರಾಮ ಪೇಚಾಡುತ್ತಾನೆ. ತಿಂಗಳ ಸಂಬಳದಿಂದ ಜೀವಿಸುವ ನಮ್ಮಂಥವರು ಮಾಸದ ಕೊನೆಗೆ "ಕೈಲೊಂದು 'ಕಾಸೂ ಇಲ್ಲ" ಎಂಬ ಭಾವವನ್ನು ಬಿತ್ತರಿಸುತ್ತದೆ, ಈ ನುಡಿಕಟ್ಟು ('ಟೀಕೆ' ನೋಡಿ). ಹಿಂದೊಂದು ಕಾಲದಲ್ಲಿ ಅಡಕೆ ನಾಣ್ಯ ರೂಪದಲ್ಲಿ ಚಲಾವಣೆಯಲ್ಲಿತ್ತೆ ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಇದು ಸಂಶೋಧನೆಗೆ ತಕ್ಕ ವಸ್ತು

ಮೊದಮೊದಲು ಎಲೆಅಡಕೆ ಸುಣ್ಣಗಳ ಸಮ್ಮೇಲನವೇ ತಾಂಬೂಲವಾಗಿತ್ತು ಎಂಬುದಕ್ಕೆ ಆಧಾರಗಳಿವೆ (ಈಗಲೂ ಬಡವರ ತಾಂಬೂಲ ಇದೇ). ಕ್ರಮೇಣ ಕರ್ಪೂರ, ಏಲ, ಕೇಸರಿ ಮೊದಲಾದ ಪರಿಮಳ ವಸ್ತುಗಳು ಸೇರಿಕೊಂಡು ತಾಂಬೂಲ ಭೋಗವಾಯಿತು. ಪಂಪನ ಕಾಲಕ್ಕೆ ಕಸ್ತೂರಿ, ಕಾಜು, ಕರ್ಪೂರ, ಪಾಳಿ ಸಂಮಿಶ್ರವಾದ ತಾಂಬೂಲ ಪ್ರಿಯವಾಗಿತ್ತು; ಮಗಮಗಿಸಿದ್ದದ್ದು ಇಂಥ ಕದಂಬದಂಬುಲ (ವಿ.ವಿ. VI ೧೦೭; ಆ.ಪು.III ೯೦ ಗ ; XI ೨೭ ಗ) ಮಜ್ಜನ ಭೋಜನ ತಾಂಬೂಲ (ಸುಗಂಧ) ಲೇಪನಗಳಿಂದ ಪಥಪರಿಶ್ರಮವನ್ನು ಪರಿಹಾರ ಮಾಡಿಕೊಳ್ಳುವ ಪದ್ಧತಿ ಆ ಕಾಲದಲ್ಲೂ ಇತ್ತು. (ವಿ.ವಿ. III೧೮ ); ತಾಂಬೂಲಸೇವನೆ ಅನಧಿಕೃತ ಭೋಗವಾಗಿತ್ತು. ಭೋಗಿಗಳ ಸೌಕರ್ಯಕ್ಕೆ ತಾಂಬೂಲಕರಂಕವಾಹಿನಿಯರು (ವಿ.ವಿ. IV ೪೩) ಹವಣಾಗಿದ್ದರು.

ಪಂಪನ ಕಾಲದಲ್ಲೇ ತಾಂಬೂಲ ಸೇವನೆ 'ಚಟ'ದ ನೆಲೆಯನ್ನು ಮುಟ್ಟಿದ್ದಿರಬೇಕು. ಎಲೆಯಡಕೆ ಮೆಲ್ಲುತ್ತ ಕುಳಿತಿದ್ದ ದ್ರೌಪದಿ ಅರ್ಜುನನನ್ನು ಕಂಡಾಗ ಅವಳ ಕೈಯಲ್ಲಿದ್ದ ಎಲೆ ಕೈಯಲ್ಲೇ, ಬಾಯಲ್ಲಿದ್ದ ತಾಂಬುಲ ಬಾಯಲ್ಲೇ ಚಲನೆಯಿಲ್ಲದೆ ನಿಂತುಬಿಟ್ಟು ಆಕೆ ದಂಗುಬಡಿದು ಹೋದಳು! (ವಿ.ವಿ. IV ೩೭) ಕನ್ನಡ ಸಾಹಿತ್ಯದಲ್ಲಿ ಇದೊಂದು ಅತಿರಮ್ಯವಾದ ವರ್ಣನೆಯಲ್ಲವೆ?

### ತಿಳಕ (Clerodendron infortunatum)

ಆಕರ: ಆ.ಪು. XI ೯೫ ಗ ; XI ೧೩೦ ಗ

"ಅಭಿನವ ಮೃಗಮದತಿಳಕಲಲಾಟೆಯರ್ ಉತ್ಪಳ ತಿಳಕತರುಗಳುಮಂ" "ನೋಡುತ್ತುಂ ಕುಸುಮಾಪಚಯ ಕ್ರೀಡಾವಿಳಾಸ"ದಲ್ಲಿದ್ದರು (XI 95 ಗ). ತಿಳಕವೃಕ್ಷಕ್ಕೆ ವೀಕ್ಷಣದೋಹದವನ್ನು ಎಸಗುತ್ತಿದ್ದ ದೃಶ್ಯ ಇದು(XI ೧೩೦).

ತಿಳಕ ಪಶ್ಚಿಮ ಘಟ್ಟದ ಕಾಡುಗಳಲ್ಲಿ ಬೆಳೆಯುತ್ತದೆ. ಸಣ್ಣಮರ. ಸಡಿಲವಾದ ಶಂಕುವಿನಾಕೃತಿಯಲ್ಲಿರುವ ಗುಚ್ಛಗಳಲ್ಲಿ ಕೆಂಪು ಹೂಗಳನ್ನು ಕೊನರಿಸುತ್ತದೆ. ಹೊಸದಾಗಿ ಅರಳಿದ ಹೂ ತೆಳುವಾದ ಪರಿಮಳದಿಂದ ಕೂಡಿದ್ದು. ಕಾಡನ್ನು ಬಿಟ್ಟು ಊರಿಗೆ ಬಂದಿಲ್ಲ, ತಿಳಕ. ಹೀಗಾಗಿ ಜನಕ್ಕೆ ಅಷ್ಟು ಪರಿಚಯವಾಗಿಲ್ಲ; ಇನ್ನೂ ಕಾವ್ಯದ ಮರವಾಗಿಯೇ ಇದೆ.

## ತೆಂಗು (Cocos nucifera)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಚೆಂದೆಂಗು, ನಾಳಿಕೇರೀ

ಆಕರ: ಆ.ಪು. I ೬೭ : XI ೬೮ : XI ೮೧

ಪಂಪನ ಕಾಲದಲ್ಲೂ ಜನ ನಾಳಿಕೇರೀ ಫಲಾಮೃತ ಸ್ವಾದದಿಂದ ತಣ್ಣನೆ ತಣಿಯುತ್ತಿದ್ದರು.

ಪಂಪ ಎರಡು ಕಡೆ ಚೆಂದೆಂಗು ಎಂದು ನಿರ್ದೇಶಿಸುತ್ತಾನೆ. ಇದೊಂದು ತೆಂಗಿನ ರಬಿಮು ಎಂದು ನನ್ನ ತಿಳಿವಳಿಕೆ. ಈ ರಬಿಮಿನ ಗಿಡಗಳಲ್ಲಿ ಎಲೆಮೊಟ್ಟೆಯ ಮೇಲೂ ಕೆಲವು ಸಲ ಕಾಯಿನ ಮೇಲೂ ಕೆಂಬಣ್ಣದ ಗೆರೆಗಳಿರುತ್ತವೆ. ಇತರ ರಬಿಮುಗಳಿಗಿಂತ ಕಾಯಿನ ಗಾತ್ರವೂ ದೊಡ್ಡದು. ಈಚೀಚೆಗೆ ಈ ರಬಿಮು ವ್ಯವಸಾಯದಲ್ಲಿ ಅಷ್ಟಾಗಿ ಕಾಣದು. ಹೊಸ ಹೊಸ ರಬಿಮುಗಳು ಹುಟ್ಟಿಕೊಂಡು ಹಳೆಯುವನ್ನು ಅಳಿಸುತ್ತಿರುವ ಕಾಲ ನಮ್ಮದು. ಕರ್ನಾಟಕದ ಕಡೂರು ತಿಪಟೂರುಗಳ ಹರವಿನಲ್ಲಿರುವ ಕೆಲವು ಹಳೆಯ ತೋಟಗಳಲ್ಲಿ ಈ ಚೆಂದೆಂಗಿನ ಮರಗಳನ್ನು ನೋಡಿದ್ದೇನೆ.

ಮೀನಾಕ್ಷಿಯ ಮಧುರೆಗೆ ನೀವು ಹೋದಿರಾದರೆ, ಆ ನಗರದ ಮಾರಿಗುಡಿ–ಕೊಳಕ್ಕೆ ಹೋಗುವುದನ್ನು ಮರೆಯಬೇಡಿ. ಕೊಳದ ಮಧ್ಯದಲ್ಲಿ ಮಂಟಪವೂ ಅದನ್ನು ಸುತ್ತುವರಿದು ಚೆಂದೆಂಗು ಮರಗಳೂ ಇವೆ. ಚೆಂದೆಂಗನ್ನೇ ತಮಿಳರು ಶೆವ್ವೆಳನೀರ್ ಎನ್ನುತ್ತಾರೆ. ಈ ಎಳನೀರಿನಲ್ಲಿ ಕ್ಷಾರಾಂಶ ಲೇಶವೂ ಇಲ್ಲ; ನೀರು ಒಂದು ಬಗೆಯ ತಿಳಿಯಾದ ಮಾಧುರ್ಯದಿಂದ ಕೂಡಿದೆ. ಸೊಗಸಾಗಿರುತ್ತದೆ ಎನ್ನುವುದಕ್ಕಿಂತಲೂ ಪಂಪನ ಮಾತಿನಲ್ಲಿ ಅಮೃತಸ್ವಾದ ಎಂದು ಭರವಸೆ ಕೊಡುತ್ತೇನೆ.

## ದಾಳಿಂಬ (Punica granatum)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ದಾಡಿಮ,

ಆಕರ: ವಿ.ವಿ. II ೩೯ ಗ

ಪರ್ಷಿಯ, ಕುರ್ದಿಸ್ತಾನ, ಅಫ್ಘಾನಿಸ್ತಾನ, ಬಲೂಚಿಸ್ತಾನಗಳಲ್ಲಿ ಸ್ವಾಭಾವಿಕವಾಗಿ ಬೆಳೆಯುವ ಗಿಡ ದಾಳಿಂಬ. ಮುಸ್ಲಿಮರು ಭಾರತಕ್ಕೆ ದಾಳಿಯಿಡುವಮೊದಲೇ ಹಣ್ಣು ಭಾರತದಲ್ಲಿ ಪರಿಚಯವಾಗಿದ್ದಿರಬೇಕು. ವರಾಹಮಿಹಿರನ ಬೃಹತ್‌ಸಂಹಿತೆಯಲ್ಲಿ (ಕ್ರಿ.ಶ. ೬ನೇ ಶತಮಾನ) ಈ ಗಿಡ ಅನುಪ ಪ್ರದೇಶದಲ್ಲಿ ಬೆಳೆಯುವುದೆಂದು ಉಕ್ತವಾಗಿದೆ. ಅಲ್ಲಿಂದ ಈಚೆಗೆ ಕಾವ್ಯವನ್ನು ಪ್ರವೇಶಿಸಿತು.

ಹರವಿದಳಿತ ಮದಗಜ ಕುಂ
ಭರಕ್ತಸಿಕ್ತಾರ್ದ್ರ ಮೌಕ್ತಿಕ ಪ್ರಕರದವೋಲ್
ಕರಮೆಸೆವ ದಾಡಿಮೀಬೀ
ಜರಾಶಿ............

ಈ ವರ್ಣನೆ (ಕರ್ನಾಟಕ ಕಾದಂಬರೀ) ಬಲು ಸೊಗಸಾದದ್ದು, ಸಮಂಜಸವಾದದ್ದು. ದಾಳಿಂಬ ಬೀಜಗಳನ್ನು ತಿರಸ್ಕರಿಸುವಂಥ ದಂತಪಂಕ್ತಿಯನ್ನು ಪಡೆದಿದ್ದನಂತೆ, ಅರ್ಜುನ (ವಿ.ವಿ. II ೩೯ ಗ). ದಾಳಿಂಬ ಬೀಜಗಳನ್ನು ಮಾನವನ ಹಲ್ಲುಸಾಲಿಗೆ ಒಪ್ಪವಿಡುವ ಬಳಕೆ ಮಧ್ಯಕಾಲೀನ ಯೂರೋಪಿನಲ್ಲೂ ಇತ್ತು. ಹಲ್ಲನ್ನು ಹೋಲುವ ದಾಳಿಂಬ ಹಲ್ಲುನೋವನ್ನು ಗುಣಪಡಿಸುವುದೆಂಬ (ಮೂಢ) ನಂಬಿಕೆಯೂ ಅಲ್ಲಿತ್ತು.

ಈಜಿಪ್ಟ್, ಅಸಿರಿಯ ದೇಶಗಳ ಪುರಾತತ್ವ ಮಣ್ಣುಪಾತ್ರೆಗಳ ಮೇಲೆ ದಾಳಿಂಬದ ಹಣ್ಣು ಹೂಗಳ ಚಿತ್ರಗಳಿವೆ. ದೊರೆ ಸಾಲಮನಿನ ದೇವಾಲಯದ ಕಂಭಗಳ ಮೇಲೆ ದಾಳಿಂಬದ ಕೆತ್ತನೆಯಿದೆ. ಯೆಹೂದಿ ನಾಣ್ಯಗಳ ಮೇಲೆ ದಾಳಿಂಬ ನಕಾಸೆಯನ್ನು ಮುದ್ರಿಸುವುದು ಪ್ರಾಚೀನ ಕಾಲದಲ್ಲಿ ಬಳಕೆಯಾಗಿತ್ತು. ಇವತ್ತಿಗೂ ಅವರಿಗೆ ದಾಳಿಂಬ ಬಹು ಪವಿತ್ರವಾದ ಸಂಕೇತ.

## ದೂರ್ವೆ (Cynodon dactyolon)

ಆಕರ: ವಿ.ವಿ. III ೨ ಗ

ಪಾಂಡವರು ವಾರಣಾವತವನ್ನು ಹೊಕ್ಕಾಗ ಅವರನ್ನು ಎದುರುಗೊಂಡ ಪುರಜನರು ತಂದಿದ್ದ ಮಂಗಳವಸ್ತುಗಳಲ್ಲಿ ದೂರ್ವಾಂಕುರ ಒಂದಾಗಿತ್ತು. ನಮ್ಮ ಕಾಲದಲ್ಲೂ ಮದುವೆ ಮೊದಲಾದ ಕೆಲವು ಗೃಹ್ಯಕರ್ಮಗಳಲ್ಲಿ ರಾಗಿಯನ್ನೋ ಬತ್ತವನ್ನೋ ಮೊಳಕೆಕಟ್ಟುವ ಸಂಪ್ರದಾಯಕ್ಕೂ ಪಂಪನ ಕಾಲದ ದೂರ್ವಾಂಕುರ ಪದ್ಧತಿಗೂ ಸಂಬಂಧವೇನಾದರೂ ಇರಬಹುದೆ?

ವಿನಾಯಕ ಚತುರ್ಥಿಗೂ ದೂರ್ವೆಕ್ಕೂ ಗಂಟುಬಿದ್ದಿರುವ ಸಂಗತಿ ಎಲ್ಲರಿಗೂ ತಿಳಿದದ್ದೇ. ಕೆಲವು ವೈದ್ಯ ಪರಂಪರೆಗಳಲ್ಲಿ ಗಣೇಶಕಲ್ಪವೆಂಬೊಂದು ರೋಗನಿವಾರಣೋಪಾಯವಿದೆ. ಬೆಳಗೆದ್ದು ಒಂದು ಹಿಡಿ ಹಸುರು ಗರಿಕೆ ಹುಲ್ಲನ್ನು ಕಲ್ಲಿನಿಂದ ಜಜ್ಜಿ, ರಸವನು ಕುಡಿದರೆ (೪೦ ದಿನ) ರಕ್ತವೃದ್ಧಿಯಾಗುತ್ತದೆಯೆಂದು ಹೇಳುತ್ತಾರೆ. ಈ ವಿಧಾನವನು ಅಳಲೆಕಾಯಿ ಪಂಡಿತನ ಕಸುಬು ಎಂದು ತಾತ್ಸಾರ ಮಾಡಲಾಗದು. ಅಮೆರಿಕದಲ್ಲಿ ಈಚೀಚೆಗೆ ಗ್ರಾಸ್‌ಎಕ್ಸ್‌ಟ್ರಾಕ್ಟ್ ಎಂಬೊಂದು ಇಂಜಕ್ಷನ್ ತಯಾರಾಗಿದೆ, ಗರಿಕೆಯ ಹುಲ್ಲಿನಿಂದ. ಅನೀಮಿಯ ರೋಗಿಗಳಿಗೆ ಐದಾರು ಇಂಜಕ್ಷನ್ನುಗಳು ವಿನಿಯೋಗವಾದರೆ ಅವರ ಆರೋಗ್ಯ ಮರುಳಿಸುತ್ತದೆ.

## ನಮೇರು (Calophyllum inophyllum)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ನಮೇರು, ಸುರಹೊನ್ನೆ

ಆಕರ: ವಿ.ವಿ. XIV ೧೭ ಗ
ಆ.ಪು. II ೬೭ ಗ : III ೩ : XI ೧೧೬
(ಪ್ರ.ಕ. ಸಂಪುಟ ೫೪, ಪುಟ ೨೦ ನೋಡಿ)

ಸುರಹೊನ್ನೆಯ ಸುವಾಸನೆಯ ಕಾರಣವಾಗಿ 'ಪರಿಮಳದರಸಿ' ಎಂದು ಬಿರುದುಕೊಟ್ಟ ಹರಿಹರ. ಹೂವಿನ ರಚನೆಗೂ ರೂಪಕ್ಕೂ ಮಣಿದು "ಪೂಗಳೊಳೇಂ ಸುರಹೊನ್ನೆ ಚೆನ್ನಮೋ" ಎಂದು ಉದ್ಗಾರತೆಗೆದ ಪಂಪ; ಈ ಹೂಗಳಿಂದ ನಿರ್ಮಿತವಾದ ಬಾಸಿಗ, ಮಾಲೆ ಮೊದಲಾದ ಆಭರಣಗಳನ್ನು ಪ್ರಸ್ತಾಪಿಸಿದ್ದಾನೆ. (ವಿವಿ. XIV ೧೭ ಗ; ಆ.ಪು. III ೩).

ಸುರಹೊನ್ನೆಯನ್ನು ಕುರಿತ ಪಂಪನ ಪದ್ಯ ಕನ್ನಡ ಸಾಹಿತ್ಯದಲ್ಲೊಂದು ಮೌಕ್ತಿಕಪುಷ್ಪ. ಹೂವಿನ ರಚನಾ ವಿಶೇಷವು ಕವಿತಾಸ್ಫೂರ್ತಿಯ ರಸಘಟ್ಟಿಯಾಗಿದೆ.ಮುತ್ತಿನಲ್ಲಿ ಕಡೆದ ಎಸಳುಗಳನ್ನು ವರ್ತುಲಾಕಾರದಲ್ಲಿ ಜೋಡಿಸು; ಇದೇ ದಳಪತ್ರ ಸಂಚಯ! ಚಿನ್ನದ ಪುಡಿಯ ಚಿಟಿಕೆಯೊಂದನ್ನು ನಡುವೆ ಚೆಲ್ಲು; ಇದೇ ಕೇಸರ ಸಮೂಹ! ಕೆಂಪಿನ ಹರಳೊಂದನ್ನು ಮಧ್ಯದಲ್ಲಿರಿಸು; ಇದೇ ಬೀಜಕೋಶ! ಇಂಥ ವರ್ಣನೆಯ ನೆಯ್ಗೆಗೂ ಶಾಸ್ತ್ರೀಯ ವಿವರಣಾವಿಧಾನಕ್ಕೂ ಹೆಚ್ಚು ವ್ಯತ್ಯಾಸವಿಲ್ಲ. ಎರಡು ಮಾರ್ಗಗಳೂ ಹೂವಿನ ಅನನ್ಯತೆಯನ್ನು ಬೇರೆ ಬೇರೆ ದೃಷ್ಟಿಗಳಿಂದ ತಿಳಿಸುತ್ತವೆ.

## ನಾಗಸಂಪಗೆ (Mesua ferrea)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ನಾಗಸಂಪಗೆ, ಪುನ್ನಾಗ.

ಆಕರ: ವಿ.ವಿ. IV ೧೭
ಆ.ಪು. I ೬೮ : XI ೯೫ ಗ : XIII ೧೧

ಪಂಪನು ಹೇಳುವಂತೆ "ಅಪರೂಪಮಪ್ಪ ಪುನ್ನಾಗ" ಈ ಮರ. ಪಶ್ಚಿಮ ಘಟ್ಟದ ಕಾಡುಗಳಲ್ಲಿ ಬೆಳೆಯುತ್ತದೆಯಾದರೂ ವಿರಳ. ಒಂದು ಮರವನ್ನು ನೋಡಿ ಇನ್ನೊಂದನ್ನು ನೋಡಬೇಕಾದರೆ ನಾಲ್ಕಾರು ಮೈಲಿ ದೂರ ಹೋಗಬೇಕು. ರೆಂಬೆ ಕೊಂಬೆಗಳಿಲ್ಲದೆ ನೀಟಾಗಿ 30–40 ಅಡಿ ಎತ್ತರ ಬೆಳೆ

ಯುವ ಮರ; ಕಾಂಡದ ತುದಿಯಲ್ಲಿ ಎಲೆಛತ್ರಿ. ಗಟ್ಟಿಯಾದ ಭಾರವಾದ ಕೆಂಬಣ್ಣದ ಚೌಬೀನೆ. ರೆಯಿಲ್ವೆ ಸ್ಲೀಪರುಗಳಿಗೆ ಬಳಸಲಾಗುತ್ತದೆ. ಸೇತುವೆ ಕಟ್ಟುವುದಕ್ಕೂ ಒಗ್ಗುತ್ತದೆ. ಒಳ್ಳೆ ಬಾಳಿಕೆ ಬರುವ ಮರ.

ಚೆಲುವಾದ ಹೂ. ಬಿಳಿಯ ದಳ ಸಮೂಹ, ಹಳದಿಯ ಕೇಸರ ನಿಚಯ. ಅರಳಿದ ಸ್ವಲ್ಪ ಹೊತ್ತಿನಲ್ಲೇ ಇವೆರಡು ಅಂಗಗಳೂ ಪುಷ್ಪಪಾತ್ರದಿಂದ ಉದುರಿ ಮರದ ಹೆಜ್ಜೆಯಲ್ಲಿ ರಾಶಿಬೀಳುತ್ತದೆ. ನವುರಾದ ಪರಿಮಳ, ಸ್ವಲ್ಪ ಮಾದಕೀಯವಾದ ಮೇಲ್ಕಂಪು. ಕಾಡುವಾಸಿಗಳು ಕಲಾಪರಿಪೂರ್ಣವಾದ ಮಧುವನ್ನು ಬಟ್ಟಿಯಿಳಿಸುತ್ತಾರೆ; ಹೂವಿನ ಪರಿಮಳವೇ ಮಧುರಸವಾದಂತಿರುತ್ತದೆ!

ಬೀಜದಿಂದ ಎಣ್ಣೆ ಹಿಂಡುತ್ತಾರೆ; ದೀಪ ಉರಿಸುವುದಕ್ಕೂ ಸಾಬೂನು ತಯಾರಿಸುವುದಕ್ಕೂ ಒದಗುತ್ತದೆ.

## ನಾರಂಗ (Citrus sp )

ಆಕರ: ಆ.ಪು. I ೬೭ ; XI ೮೧

ಈಳೆ ಜಾತಿಗೆ ಸೇರಿದ ಸಣ್ಣಮರ. ಪ್ರಾಚೀನ ದಕ್ಷಿಣ ಭಾರತದಲ್ಲಿ ಅನೇಕ ಈಳೆ ಜಾತಿಗಳಿದ್ದವು.– ಕಿತ್ತೀಳೆ (ಕಿತ್ತಳೆ), ಹೇರೀಳೆ (ಹೇರಳೆ), ಮಾದೀಳೆ (ಮಾದಾಳ), ನಿಂಬೆ ಇತ್ಯಾದಿ. ನಾರಂಗ ಎಂಬ ಪದ ಮೂಲತಃ ದ್ರಾವಿಡ ಭಾಷಾವರ್ಗಕ್ಕೆ ಸೇರಿದುದಲ್ಲ; ಉತ್ತರ ಭಾರತದ ನುಡಿಗಳಲ್ಲಿ ಈಳೆ ಜಾತಿಯ ಬೇರೆ ಬೇರೆ ರೂಪುಗಳನ್ನು ನಿರ್ದೇಶಿಸುತ್ತದೆ.

ಪಂಪನಕಾಲಕ್ಕೆ ಉತ್ತರ ಭಾರತದ ನಾರಂಗ ಜಾತಿಗಳು ದಕ್ಷಿಣ ಭಾರತದಲ್ಲಿ ಪರಿಚಯವಾಗಿದ್ದಿರಬೇಕು. ಆರಂಜ್ (orange) ಪದವೂ ಈ ಭಾಷಾ ಪಂಗಡಕ್ಕೆ ಸೇರಿದ್ದು.

## ನೆಯ್ದಿಲು (Nymphaea Stellata ; N. Pubescens)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ನೆಯ್ದಿಲು, ಕನ್ನೆಯ್ದಿಲು, ಕರ್ನೆಯ್ದಿಲು, ಚೆನ್ನೈದಿಲು, ಕುವಳಯ, ನೀಳೋತ್ಪಳ.

ಆಕರ: ವಿ.ವಿ. I ೫೨ ; I೧೩೮ ; III ೫೫ ; IV ೭೦ ; V ೫ ಗ ; VI ೨೭ ; IX ೪೯

ಆ.ಪು. I ೬೨ ; I ೬೭ ; IV ೨೦ ; IV ೨೬ ಗ ; XI ೧೨೩ ; XII ೧೨
(ಪ್ರ.ಕ. ಸಂಪುಟ ೫೪, ಪು. ೧೪ ನೋಡಿ)

ನಿಂತ ನೀರಿನಲ್ಲಿ ನೆಯ್ದಿಲು ಬೆಳೆಯುತ್ತದೆ, ಎಂದರೆ ಕೆರೆ ಕೊಳ ಕುಂಟೆಗಳಲ್ಲಿ; ಪಂಪನಿಗೆ ಇದು ಚೆನ್ನಾಗಿ ಗೊತ್ತಿತ್ತು. (ವಿ.ವಿ. I ೧೩೮ ಆ.ಪು. I ೬೭). ಕವಿಸ್ವಾತಂತ್ರ್ಯಪ್ರಿಯತೆಯಿರಿದಾಗಿ ಹರಿಯುವ ಕಾಲುವೆಯಲ್ಲೂ ಬೆಳೆಯುತ್ತಿತ್ತು ಎನ್ನುತ್ತಾನೆ (ವಿ.ವಿ. I ೫೨). ಸ್ವಯಂವರ ಶಾಲೆಯನ್ನು ಹೊಕ್ಕ ದ್ರೌಪದಿಯನ್ನು ಕಂಡ ದುರ್ಯೋಧನನು "ನನ್ನ ಮೃದು ಹೃದಯವನ್ನು ಈ ಹೂ ಬಾಣ ಭೇದಿಸಿತು" ಎಂದು ಭಾವೋದ್ರೇಕಗೊಂಡು ಕೈಲಿ ಹಿಡಿದುಕೊಂಡಿದ್ದ ನೆಯ್ದಿಲು ಹೂವನ್ನು ತಿರುಗಿಸುತ್ತಿದ್ದನಂತೆ (ವಿ.ವಿ. III ೫೫).

ನೆಯ್ದಿಲು ದಂಟನ್ನು ತುದಿವರೆಗೂ ಸೀಳುವ ಹಾಗೆ ಜರಾಸಂಧನನ್ನು ಭೀಮ ಸಿಗಿದು ಹಾಕಿದ (ವಿ.ವಿ. VI ೨೭). ನೆಯ್ದಿಲ ಕಾಂಬಿನಿಂದ ರೂಪಿಸಿದ ನೂಪುರವನ್ನೂ (ವಿ.ವಿ. V ೫ ಗ) ಬಿರಿಮುಗುಳಿನಿಂದ ಅನುವಾದ ಕರ್ಣಪೂರವನ್ನೂ (ಆ.ಪು. XII ೧೨ ; ವಿ.ವಿ. V ೫ ಗ) ಧರಿಸುವುದು ಪಂಪನ ಕಾಲದ ಸ್ತ್ರೀಯರಿಗೆ ಬಲುಪ್ರಿಯವಾಗಿತ್ತು. ಉನ್ನತಕುಚೆಯರ ಕಣ್ಣಿನ ಕಾಂತಿಯನ್ನು ಚೆನ್ನೈದಿಲೆಯ ಎಸಳಿಗೆ ಒಪ್ಪವಿಡಲಾಗಿದೆ (ಆ.ಪು. XI ೧೨೩)

ನೆಯ್ದಿಲಿನಲ್ಲಿ ಬೇರೆ ಬೇರೆ ಬಣ್ಣದ ಹೂಗಳನ್ನು ತಳೆಯುವ ರಖಮುಗಳಿವೆಯಾದರೂ ಶಾಸ್ತ್ರೀಯ ದೃಷ್ಟಿಯಲ್ಲಿ ಇವೆಲ್ಲ ಮೇಲೆ ಕಾಣಿಸಿರುವ ಎರಡು ಸ್ಪೀಷೀಸುಗಳಿಗೆ ಸೇರಿದವು: ಹಳದಿ (ಹೊನ್ನೈದಿಲು), ಕೆಂಪು ಚೆನ್ನೈದಿಲು), ಬಿಳಿ (ಬೆಳ್ನೆಯ್ದಿಲು)–ಇವು ಪ್ಯೂಬಿಸೆನ್ಸ್ ಸ್ಪಿಷೀಸಿಗೆ ಸೇರಿದವು. ನೀಲಿ (ಕರ್ನೆಯ್ದಿಲು, ಕನ್ನೆಯ್ದಿಲು, ನೀಲೋತ್ಪಲ)–ಇವು ಸ್ಟೆಲ್ಲೇಟ ಸ್ಪೀಷೀಸಿಗೆ ಸೇರಿದ್ದು.
ಳಲ್ಲಿ

## ನೆಲ್ಲಿ (Emblica officinalis)

ಪಂಪನು ಉಪಯೋಗಿಸಿರುವ ಪರ್ಯಾಯ ಪದ: ತೋರ ನೆಲ್ಲಿ

ಆಕರ: ವಿ.ವಿ. XII ೧೦೮ ಗ

ಬೆಟ್ಟದ ನೆಲ್ಲಿ, ಅರನೆಲ್ಲಿ ಎಂದು ನಮಗೆ ಪರಿಚಿತವಾಗಿರುವ ಸ್ಪೀಷೀಸೇ ಪಂಪನ ತೋರನೆಲ್ಲಿ; ಇದೇ 'ಕರತಲಾಮಲಕ', 'ಅಂಗೈಯ ನೆಲ್ಲಿಕಾಯಿ'.

ವೇದೋಕ್ತವಾಗಿಲ್ಲದಿರುವುದಾದರೂ ಬೌದ್ಧಯುಗಾರಂಭದಿಂದ ಜಾತಕಗಳಲ್ಲಿ ನೆಲ್ಲಿಕಾಯಿ (ಆಮಲಕ, ಆಮಲ) ಉಲ್ಲೇಖಿಗೊಂಡಿದೆ. ರೋಗಪೀಡಿತರಾದ ಭಿಕ್ಷುಗಳಿಗೆ ಈ ವಸ್ತು ಪಥ್ಯಾಹಾರವಾಗಿತ್ತು. ಅಲ್ಲಿಂದ ಈಚೆಗೆ ವೈದ್ಯದಲ್ಲೂ ಉಪಯೋಗ ಹೊಂದಿದೆ. ಆಮಲಕ ಚೂರ್ಣ, ಗುಡಾಮಲಕ, ಆಮಲಕಾಸವ ಮೊದಲಾದ ಪರಿಪಾಕಗಳು ನಿತ್ಯಾಹಾರದಲ್ಲೂ ಸೇರುವ ವ್ಯಂಜನಗಳೆಂಬುದು ಮಂಗರಸನ ಸೂಪಶಾಸ್ತ್ರದಿಂದ ತಿಳಿದು ಬರುತ್ತದೆ.

೩೦–೪೦ ಅಡಿ ಎತ್ತರ ಬೆಳೆಯುವ ಮರ, ನೆಲ್ಲಿ. ಹೂವಿನ ರೂಪದಲ್ಲಾಗಲಿ, ಗಾತ್ರದಲ್ಲಾಗಲಿ, ಬಣ್ಣದಲ್ಲಾಗಲಿ, ರಚನೆಯಲ್ಲಾಗಲಿ ಆಕರ್ಷಕತೆಯಿಲ್ಲ. ಕಾಯಿತಳೆದ ಟೊಂಗೆ ನೋಟಕ್ಕೆ ಚೆಲುವಾಗಿರುತ್ತದೆ. ಕಾಯಿ ತಿಂದಾದ ಮೇಲೆ ತಣ್ಣೀರು ಕುಡಿದ ಪ್ರಾಚೀನ ತಮಿಳು ಕವಿಗಳು ನಾಲಗೆಯ ಮೇಲೆ ನಿಂತ ಸಿಹಿರುಚಿಯನ್ನು ಮೊಲೆಹಾಲಿನ ಸವಿಗೆ ಹೋಲಿಸಿದರು. ಕಾಯಿನ ದುಂಡುರೂಪವನ್ನೂ ಹೊಳಪನ್ನೂ ಜಿಂಕೆಯ ಕಣ್ಣಿಗೆ ಸರಿದೂಗಿದರು. ನೆಲ್ಲಿಕಾಯಿಗಿಂತಲೂ ಹಿರಿಯಗಾತ್ರದ ಮುತ್ತನ್ನು ಕುರಿತಿದ್ದಾನೆ, ಪಂಪ.

## ಹಲಸು (Artacarpus integra)

ಆಕರ: ಆ.ಪು. XI ೮೧

ಪ್ರಾಚೀನಕಾಲದಿಂದಲೂ ತರಕಾರಿಯಾಗಿ, ತಿನ್ನುವ ಹಣ್ಣಾಗಿ ಉಳಿದುಕೊಂಡು ಬಂದಿರುವ ಪದಾರ್ಥ ಹಲಸು. ಬೆಟ್ಟಹಲಸು, ಹೆಬ್ಬಲಸು, ಕಿರಿಹಲಸು ಎಂಬೆಲ್ಲ ಸ್ಪೀಷೀಸುಗಳೂ ಕರ್ನಾಟಕದ ಕಾಡುಗಳಲ್ಲಿ ಬೆಳೆಯುತ್ತವೆ. ಎಲ್ಲವೂ ತಿನಿಸು ಪದಾರ್ಥವಾದರೂ ಹಲಸು (ಯಾವ ವಿಶೇಷಣವೂ ಇಲ್ಲದ ಹಲಸು) ಬಹುವಾಗಿ ಜನಪ್ರಿಯತೆಗಳಿಸಿದೆ. ಮಂಗರಸನ ಸೂಪಶಾಸ್ತ್ರದಲ್ಲಿ ಸುಮಾರು ೩೧ ಬಗೆಯ ಹಲಸು ಭಕ್ಷ್ಯಗಳ ವಿವರಣೆ ದೊರಕುತ್ತದೆ.

ಹಲಸಿನ ಕಾಯಿ ಹಣ್ಣುಗಳಂತೆಯೇ ಚೌಬೀನೆಯೂ ಬಹುಕಾಲದಿಂದ ನಮ್ಮ ಉಪಯೋಗಕ್ಕೆ ಒಗ್ಗಿದೆ. ಬೌದ್ಧ ಭಿಕ್ಷುಗಳು ಚೌಬೀನೆಯ ಚಕ್ಕೆಗಳನ್ನು ನೀರಿನಲ್ಲಿ ಕುದಿಸಿ, ತನ್ಮೂಲಕ ಕಾವಿ/ಹಳದಿ ಬಣ್ಣಗೊಂಡ ನೀರಿನಿಂದ ಬಟ್ಟೆಗೆ ಬಣ್ಣಕಟ್ಟುತ್ತಿದ್ದರೆಂದು ಜಾತಕಗಳು ತಿಳಿಸುತ್ತವೆ. ಭಿಕ್ಷುಗಳ ಭಿಕ್ಷಾಪಾತ್ರೆಯೂ ಹಲಸಿನ ಚೌಬೀನೆಯಿಂದ ಸೃಜನವಾಗುತ್ತಿತ್ತು. ಕೇರಳೀಯರ ಗಣನೆಯಲ್ಲಿ ಹಲಸೊಂದೇ 'ಚೌಬೀನೆಯ ರಾಜ!'. ನಾವು ತೇಗಕ್ಕೆ ಕೊಟ್ಟಿರುವ ಪ್ರಾಶಸ್ತ್ಯವನ್ನು ಅವರು ಹಲಸಿಗೆ ಕೊಟ್ಟಿದ್ದಾರೆ.

ಕುತ್ತಾಲ (ತಿರುನೆಲ್ವೇಲಿ ಜಿಲ್ಲೆ)ದ ಕಾಡುಗಳಲ್ಲಿ ಬೆಳೆಯುವ ಹಲಸು ರಖಮು ಗುಜ್ಜು ಹಲಸು ಎನಿಸಿಕೊಂಡಿದೆ. ಸಾಧಾರಣ ಹಲಸಿಗಿಂತ ಗಾತ್ರದಲ್ಲಿ ಸಣ್ಣ; ಮರವೂ ಅಷ್ಟೆ, ಹಣ್ಣೂ ಅಷ್ಟೆ. ನೆಲದೊಳಗೆ ಹರಡಿಕೊಂಡಿರುವ ಬೇರುಗಳಿಂದ ಹಣ್ಣು ಉತ್ಪತ್ತಿಯಾಗಿ, ಭೂಪದರವನ್ನು ಒಡೆದುಕೊಂಡು ನೆಲದ ಮೇಲೆ ಮಲಗುತ್ತದೆ. ಹಣ್ಣು ತಾನಾಗಿಯೇ ಬಿರಿದು ತೊಳೆಗಳಿಂದ ಜೇನಿನಂಥ ಸ್ರಾವ ಸುರಿಯುತ್ತದೆ.

ಹಲಸಿನ ಮರದ ನೆರವಿಲ್ಲದಿದ್ದರೆ ಕರ್ನಾಟಕ ಸಂಗೀತದ ವಾದ್ಯತ್ರಯವಾದ ತಂಬೂರಿ ವೀಣೆ ಮೃದಂಗಗಳು ಕೀರ್ತಿ ಪಡೆಯುತ್ತಿದ್ದವೆ ಎಂದು ಸಂದೇಹ ಪಡುತ್ತಿದ್ದೇನೆ.

## ಪಾದರಿ (Stereospermum suaveoleus)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಪಾದರಿ, ಪಾಟಲಿ.

ಆಕರ: ಆ.ಪು. XI ೮೭ ; XI ೧೧೫

ಎಷ್ಟೋ ಹೂಗಳು ಒಂದು ಮೂಸಲಿಗೆ ಹಳಸುತ್ತವೆ; ಪಾದರಿ ಹೀಗಲ್ಲ. ಆದರ ಪರಿಮಳವಾಗಲಿ ಚೆಲುವಾಗಲಿ ಬಾಡವು—ಇದು ಪಂಪನ ಅಭಿಪ್ರಾಯ. ಮೊಗ್ಗಿನಿಂದ ಬಿರಿದ ಪಾದರಿ ಹೂವಿನ ದಳನಳಿಗೆ ಬಹುಬೇಗ ಉದುರಿಹೋಗುತ್ತದೆ. (ನಾಗಸಂಪಗೆಯಂತೆ) ಮರದ ಹೆಜ್ಜೆಯ ಸುತ್ತ ಹಳದಿ—ಊದಾ ಬಣ್ಣದ ಜಮಖಾನ ಹಾಸುತ್ತದೆ. ದಳನಳಿಗೆ ಬಾಡುತ್ತದೆಯಾದರೂ ಪರಿಮಳ ಬಹುಕಾಲ ನಿಂತಿರುತ್ತದೆ. ಮೃದುವಾದ ಕಳಕಳಿಸುವ ಪರಿಮಳ.

ಪಾದರಿ ದೊಡ್ಡಮರ. ಚೈತ್ರದಲ್ಲಿ ಹೂಬಿಡುತ್ತದೆ. ಹೂ ಉದುರುವಾಗ ಅದರೊಂದಿಗೆ ಅಡಗಿರುವ ಮಧುಹನಿಗಳೂ ತುಂತುರು ಮಳೆ ಬೀಳುತ್ತವೆ. ಇಂಥ ಮರದಡಿ ನಿಂತು ಮೈಮರೆತಾಗ ಅನುಭವಿಸುವ ಆನಂದಕ್ಕೆ ಎಣೆಯೇ ಇಲ್ಲ.

## ಪಾರಿಜಾತ

ಆಕರ: ವಿ.ವಿ. XIV ೧೭ ಗ

ಆ.ಪು. II ೭೩ ; III ೩

ಪಂಪನ ಕಾಲದಲ್ಲಿ ಪಾರಿಜಾತ ಹೂಗಳಿಂದ ಹಾರಕಟ್ಟುತ್ತಿದ್ದರೆಂದು ತಿಳಿದು ಬರುತದೆ (ವಿ.ವಿ. XIV೧೭ಗ;ಆ.ಪು III ೩) ಯಾದರೂ ಹೂವನ್ನು ಕುರಿತಾಗಲಿ ಮರವನ್ನು ಕುರಿತಾಗಲಿ ವಿವರಣೆಯಿಲ್ಲ.

ಇಂದು ನಮಗೆ ಪಾರಿಜಾತ ಎಂದು ಪರಿಚಿತವಾಗಿರುವ ಮರ **Nyctanthes arbor-tristis.** ೧೦–೧೫ ಅಡಿ ಎತ್ತರದ ಪೊದರುಮರ. ಉಪ್ಪುಕಾಗದದಂತೆ ಎಲೆಮೈ, ಬೂದಿಮಿಶ್ರವಾದ ಹಸುರು ಬಣ್ಣ. ಎಲೆಯುದುರಿದಾಗ ನಗ್ನ ರೆಂಬೆ ಕೊಂಬೆಗಳು ಅಸ್ಥಿಪಂಜರದಂತೆ ಕಡ್ಡಿ ಕಡ್ಡಿ. ನೋಟಕ್ಕೆ ಅಂದ ಎನಿಸಿಕೊಳ್ಳಬಹುದಾದಂಥ ಗುಣವೇನೂ ಇಲ್ಲ. ಗೊಂಚಲುಗಳಲ್ಲಿ ಹೂಬಿಡುತ್ತದೆಯಾದರೂ ಎಲ್ಲ ಮೊಗ್ಗುಗಳೂ ಒಂದೇ ಸಲ ಅರಳವು. ಅರಳಿದ ಹೂ ಒಡನೆಯೇ ಉದುರುತ್ತದೆ. ಹೂವಿನ ಕಾಡು—ಕೊಳವೆ ಹವಳದ ಕೆಂಪು ಬಣ್ಣ. ಕಾಡು—ಕೊಳವೆಯ ತುದಿಯಿಂದ ೯೦ ಡಿಗ್ರಿ ಕೋನದಲ್ಲಿ ಹರಡಿದ ಐದು ಬಿಳಿದಳಗಳು ("ಸಂಜೆಗೆಂಪು ಮೊದಲು ಹಿಂದೆ ಬೆಳುದಿಂಗಳು" ಎಂದು ಬೇಂದ್ರೆಯವರು ನಿರ್ದೇಶಿಸಿರುವ ಹೂ ಇದೇ ಇರಬಹುದೆ?). ದಳದ ಮೊನೆ ಸಾಮಾನ್ಯವಾಗಿ ಇಬ್ಭಾಗವಾಗಿದೆ. ನವುರಾದ ಪರಿಮಳ. ತೀರ ಕೋಮಲ ಶರೀರ, ಮುಟ್ಟಿದರೆ ನಸುಗಿ ಹೋಗುವಷ್ಟು ಮೃದು. ಉದುರಿದೊಡನೆ ಬಾಡುತ್ತದೆ. ಹಾರಕಟ್ಟುವುದಕ್ಕೆ ಒಗ್ಗದು. ಪ್ರಯಾಸಮಾಡಿ ಕಟ್ಟಿದರೂ ಒಂದು ಕಡೆಯಿಂದ ಮಾಸಿಕೊಂಡೇ ಬರುತ್ತದೆ.

ಈ ಪಾರಿಜಾತ ನಮ್ಮ ಮನೆ ತೋಟಗಳನ್ನೋ ಸಾರ್ವಜನಿಕ ತೋಟಗಳನ್ನೋ ಬಿಟ್ಟು ವನ್ಯನೆಲೆಯಲ್ಲಿ ಬೆಳೆಯುತ್ತಿಲ್ಲ. ದಕ್ಷಿಣ ಭಾರತದಲ್ಲೂ ಇಲ್ಲ, ಉತ್ತರ ಭಾರತದ ಬಯಲು ಸೀಮೆಯಲ್ಲೂ ಇಲ್ಲ, ತೌರನ್ನು ಕಾಣಬೇಕಾದರೆ ಹಿಮಾಲಯದ ಪೂರ್ವದಿಕ್ಕಿನ ಪರ್ವತಶ್ರೇಣಿಗಳು, ನಾಗಾಲಯ, ಮೇಘಾಲಯ, ಆಸ್ಸಾಂ, ನೇಪಾಲ ಪ್ರದೇಶಗಳ ಕಾಡಿಗೆ ಹೋಗಬೇಕು. ಅಲ್ಲಿಂದ ದಕ್ಷಿಣ ಭಾರತಕ್ಕೆ ಯಾವಾಗ ಪ್ರಯಾಣ ಬೆಳೆಸಿತೆಂದು ಹೇಳುವುದು ಸದ್ಯಕ್ಕೆ ಸಾಧ್ಯವಿಲ್ಲ. ಹೀಗಾಗಿ ಪಂಪನ ಪಾರಿಜಾತ ಇದೇ (ಎಂದರೆ ನಿಕ್ಟಾಂಥಿಸ್ ಆರ್‌ಬಾರ್–ಟ್ರಿಸ್ಟಿಸ್) ಎಂದು ನಿರ್ದಿಷ್ಟವಾಗಿ ತಿಳಿಯಲಾಗದು.

ಪಾರಿಜಾತ ನಮ್ಮ ಪುರಾಣೇತಿಹಾಸಗಳಲ್ಲಿ ಪ್ರಸ್ತಾಪಗೊಂಡಿರುವ ಕಾಲ್ಪನಿಕ ವೃಕ್ಷ. ಹಾಲ್ಗಡಲನ್ನು ಕಡೆದಾಗ ಮೇಲೆದ್ದು ಬಂದ ಹದಿನಾಲ್ಕು ರತ್ನಗಳಲ್ಲೊಂದು. ನಂದನ ವನದಲ್ಲಿ ಬೆಳೆಯುತ್ತಿತ್ತು. ಅಲ್ಲಿಂದ ಸತ್ಯಭಾಮೆಯ ಅಂಗಳದಲ್ಲಿ ಮೊದಲು ಬೆಳೆಯಿತು. ಆದರೆ ತಳೆದ ಹೂವೆಲ್ಲ ರುಕ್ಮಿಣಿಯ ಅಂಗಳದಲ್ಲಿ ಉದುರಿತು! ಕಾಲ್ಪನಿಕ ಹೂವನ್ನು ಹುಡುಕಿಕೊಂಡು ಹೋಗುವುದಕ್ಕೆ ಅಗತ್ಯವಾದ ವೀರ ಸಾಹಸಗಳು ನನ್ನಲ್ಲಿಲ್ಲ, ಅಪೇಕ್ಷೆಯೂ ಇಲ್ಲ. ಚಂದ್ರಪ್ರಭ ಪುರಾಣ (VII ೬೦) ಬಾಲಚೂತವನ್ನೇ "ಧಾತ್ರೀ ಪಾರಿಜಾತ" ಎನ್ನುತ್ತದೆ.

ಆದರೆ ಪಂಪನ ಪಾರಿಜಾತ ಕಾಲ್ಪನಿಕವಲ್ಲ ಎಂದು ಹೇಳುವ ಧೈರ್ಯ ಮಾತ್ರ ನನಗಿದೆ. ಅದರ ಅನನ್ಯತೆಯನ್ನು ಕುರಿತ ಸಂಶೋಧನೆ ಮುಂದುವರಿಯಬೇಕಾಗಿದೆ.

## ಬಕುಳ (Mimusops elengi)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು : ಬಕುಳ, ವಕುಳ, ಮುಕುಳ.

ಆಕರ: ವಿ.ವಿ. II ೧೬

ಆ.ಪು. XI ೯೫ ಗ ; XI ೧೨೪ ; XI ೧೩೦ ಗ

ಮುಕ್ಕುಳಿಸಿ ಉಗುಳುವ ಮಧುವಿಗಿಂತ ಮಿಕ್ಕ ಆಮೋದವನ್ನು ಪಡೆದ ಕಂಪು ಬಕುಳ ಪುಷ್ಪದ್ದು (ಆ.ಪು. XI ೧೨೪). ಈ ನುಡಿಗಟ್ಟಿನಲ್ಲಿ ಗಂಡೂಷ ದೋಹದ ಧ್ವನಿಯಿಟ್ಟಿದ್ದಾನೆ, ಪಂಪ. ಬಕುಳ ವೃಕ್ಷವನ್ನು ಹೂತಳೆಯುವಂತೆ ಪ್ರೇರೇಪಿಸುವುದಕ್ಕೆ ಬಾಯಲ್ಲಿ ಮಧುವನ್ನು ಮುಕ್ಕುಳಿಸಿ ಮರದ ಮೇಲೆ ಉಗಿಯುವುದು ಸಂಪ್ರದಾಯವಿಧಿ. ಈ ವಿಧಿಯಿಂದ ಕೊನರಿದ ಹೂಗಳ ಕಂಪು ಉಗುಳಿದ ಮಧುವಿನ ವಾಸನೆಗಿಂತಲೂ ತೀವ್ರವಾದದ್ದು, ಮಾದಕೀಯವಾದದ್ದು ಎಂದು ಭಾವ.

ಭಾರತೀಯ ಕಾವ್ಯ ಸಂಪ್ರದಾಯದಿಂದ ನಮಗೆ ತಿಳಿದು ಬಂದಿರುವ ವೃಕ್ಷದೋಹದ ಕ್ರಮಗಳು ಹತ್ತು ವಿಧ. ಕಾಲಿದಾಸನ ಮಾಲವಿಕಾಗ್ನಿಮಿತ್ರ ನಾಟಕದಿಂದ ಅಶೋಕದೋಹದವನ್ನು ಕುರಿತ ಕೆಲವು ವಿವರಣೆಗಳು ದೊರೆಯುತ್ತವೆ. ಬೇರೆ ಕವಿಗಳಾರೂ ಇತರ ದೋಹದ ವಿಧಿಗಳನ್ನು ವಿವರಿಸಹೋಗಿಲ್ಲ. ಪಂಪ ಬಕುಳ ದೋಹದ ಕ್ರಮದ ವಿವರಣೆಗಳನ್ನು ಸ್ವಲ್ಪಮಟ್ಟಿಗೆ ವಿಸ್ತರಿಸಿದ್ದಾನೆ. (ಪ್ರ.ಕ. ಸಂಪುಟ, ೪ ಪುಟ ನೋಡಿ).

ಸರ್ವ ಋತುಗಳಲ್ಲೂ ಹೊಳಪು ಹಸುರೆಲೆ ತಳೆದು ೨೦–೩೦ ಅಡಿ ಎತ್ತರ ಬೆಳೆಯುವ ಮರ ಬಕುಳ. ಮಾಸಲು ಬಿಳಿಬಣ್ಣದ ನಕ್ಷತ್ರಾಕಾರದ ಹೂ. ಇದು ಹೊಮ್ಮುವ ಮಾದಕೀಯ ವಾಸನೆಯನ್ನು ಒಂದು ಮೈಲಿ ದೂರದಿಂದಲೇ ಗುರುತಿಸಬಹುದು; ಬಹು ಬೇಗ ವೆಗಟಾಗುತ್ತದೆ, ಎಂಥವನನ್ನಾದರೂ ಸೊಕ್ಕಿಸುತ್ತದೆ. ಹೂ ಒಣಗಿದರೂ ವಾಸನೆ ಬಾಡದು; ನೀರು ಚಿಮುಕಿಸಿದರೆ ಮೊದಲಿನ ಪರಿಮಳ ಮರುಕಳಿಸುತ್ತದೆ.

ಪೂರ್ವ ಪಶ್ಚಿಮ ಘಟ್ಟಗಳಲ್ಲಿ ಬಕುಳ ಸ್ವಾಭಾವಿಕವಾಗಿ ಬೆಳೆಯುತ್ತದೆ. ಬಹುಕಾಲದ ಹಿಂದೆಯೇ ಊರಿನ ತೋಟಗಳಲ್ಲಿ ಬೆಳೆಯಿಸುವ ಬಳಕೆ ಆರಂಭವಾಗಿತ್ತು. ಮಧ್ಯಕಾಲದ ತಮಿಳುನಾಡಿನ ನಂದನವನಗಳಲ್ಲಿ ಸಾಧಾರಣವಾಗಿ ಬೆಳೆಯುತ್ತಿತ್ತು; ಶಿವಾರ್ಚನೆಗೆ ಬಕುಳ ಪುಷ್ಪ ಶ್ರೇಷ್ಠತೆ ಪಡೆದಿತ್ತು.

## ಬಕ್ಕೆ

ಆಕರ: ಆ.ಪು. XI ೬೮

ಇದರ ಅನನ್ಯತೆ ತಿಳಿಯದು.

## ಬಾಳೆ (Musa sp.)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಕದಳಿ, ಬಾಟಿ, ರಂಭಾ

ಆಕರ: ವಿ.ವಿ. I ೬೮ ಗ; II ೩೯ ಗ; V ೫ ಗ; V ೧೦ ಗ; VII ೮೧ ಗ
ಆ.ಪು. XI ೬೮; XI ೮೧; XI ೯೫ ಗ
(ಪ್ರ.ಕ. ಸಂಪುಟ 54, ಪುಟ 15 ನೋಡಿ)

"ವಾಟಿಲೆಯ ಬಿಜ್ಜಣಿಗೆಗಳಿಂ ಬೀಸಲ್ವೇಟ್ದು ತಣ್ಬುಗೆಯ್ಕೆ" (ವಿ.ವಿ. V ೫ ಗ)ಎನ್ನುತ್ತಾನೆ ಪಂಪ. ಇದು ಬರಿಯ ಕವಿಕಲ್ಪನೆಯೆಂದು ನನಗೆ ತೋರದು. ಅವನ ಕಾಲದಲ್ಲಿ ಬಾಳೆಲೆಯಿಂದ ಬೀಸಣಿಗೆಯನ್ನು ರೂಪಿಸುವ ವಿಧಾನವಿತ್ತೆಂದು ನನ್ನ ನಂಬಿಕೆ. ತಾಳೆಯೋಲೆಯ ಬೀಸಣಿಗೆ ನಮ್ಮ ಕಾಲದಲ್ಲೂ, ಬಳಕೆಯಲ್ಲಿದೆಯಲ್ಲವೆ? ಅದರಷ್ಟು ಬಾಳಿಕೆಯಿಲ್ಲದಿದ್ದರೂ ಒಣ ಬಾಳೆಲೆಯ ಬೀಸಣಿಗೆ ತಾತ್ಕಾಲಿಕ ಪ್ರಯೋಜನವನ್ನಾದರೂ ಇತ್ತಿದ್ದಿರಬೇಕು.

ತೊಡೆಯನ್ನು ಬಾಳೆಕಂಬದೊಡನೆ ಹೋಲಿಸುವುದು ಸಾಮಾನ್ಯ ಕಾವ್ಯಾಲಂಕಾರ. ಪಂಪನೂ ಇದನ್ನೇ ಮಾಡಿದ್ದಾನೆ (ಆ.ಪು. XI ೯೫). ಕವಿಗಳಿಗೆ ಎಳವಾಳೆ ಸೌಕುಮಾರ್ಯದ 'ಪ್ರತಿಮೆ'. "ಕಾಯ್ದ ಪುಡಿಯೊಳಗೆ ಬಿಸುಟ್ಟೆಳವಾಟೆಯಂತೆ" ಎಂದು ಸುಭದ್ರೆಯ ಕಾದಲುನೋವನ್ನು ವರ್ಣಿಸಿದ್ದಾನೆ. ಎಳೆವಾಟೆಯನ್ನು ಎಳೆಯ ಮೀನು ಎಂದು ಅರ್ಥಯಿಸಿದೆ 'ದೀಪಿಕೆ'. ಇದು ಸಂದರ್ಭೋಚಿತವಾಗಿಲ್ಲವೆಂದು ನನಗನಿಸುತ್ತದೆ. ಹಾಗೆ ಬಿದ್ದ ಮೀನು ಬೆಂದು ಒದ್ದಾಡಿ ಅಲ್ಪಕಾಲದಲ್ಲೇ ಸತ್ತು ಹೋಗುತ್ತದೆ. ಕಾಮಜ್ವರ ಪೀಡಿತಳಾಗಿ "ಮಮ್ಮಲ ಮಱುಗು"ತ್ತಿದ್ದವಳನ್ನು ಈ ಸಂದರ್ಭದಲ್ಲಿ ಮೀನಿಗೆ ಹೋಲಿಸುವುದಕ್ಕಿಂತಲೂ ಬಾಳೆಗೆ ಒಪ್ಪವಿಡುವುದು ಉಚಿತವಾಗಿದೆಯೆಂದು ನನ್ನ ಸ್ವಂತ ಅಭಿಪ್ರಾಯ. ಇದೇ ಜಾಡನ್ನು ಹಿಡಿದು ಈಚಿನ 'ಕವಿಚೈತ್ರವನ ಚೂತ'ನು "ಫಲಿತ ಕದಳಿ ಮುರಿದಿಳೆಗೊರಗುವಂತೆ" ಎಂದಿದ್ದಾನೆ.

ಆನೆ ಕುದುರೆಗಳ ಸವಾರಿಯಿಂದ ಅರ್ಜುನನ ತೊಡೆಗಳು 'ಸಾಣೆಕಲ್ಲನ್ನು ಕಟ್ಟಿದ ಹಾಗೆ' ಇದ್ದವು, ಎನ್ನುತ್ತದೆ 'ದೀಪಿಕೆ'. ಪಂಪವಾಣಿ "ಎಳವಾಟೆಯ ದಿಂಡಿನೊಳ್ ಸಾಣೆಗಟ್ಟಿದಂತಿರ್ದವು" ಎಂದಿದೆ (ವಿ.ವಿ. II ೩೯ಗ). 'ಸಾಣೆಗಟ್ಟು' ಎಂದರೆ ಈ ಸಂದರ್ಭದಲ್ಲಿ 'ಎಳೆಬಾಳೆಯ ದಿಂಡಿಗೆ ಸಾಣೆ ಹಿಡಿದ ಹಾಗೆ' "ಎಳೆಬಾಳೆಯ ದಿಂಡನ್ನು ಸಾಣೆಗಲ್ಲಿನಿಂದ ಉಜ್ಜಿದ ಹಾಗೆ" ಎಂದು ಭಾವಿಸಿದರೆ ಕಾವ್ಯಾರ್ಥ ಇನ್ನೂ ರಸವತ್ತಾಗುತ್ತದೆ, ಉಚಿತವಾಗುತ್ತದೆ ಎಂದು ನನ್ನ ಗ್ರಹಿಕೆ.

ಅರ್ಜುನನ ಮೈ ಬಣ್ಣವನ್ನು ಕುರಿತು "ಕದಳೀಗರ್ಭಶ್ಯಾಮಮೆಂಬ ಬಣ್ಣದಂತಾದುದು" ಎಂದು ಪಂಪನು ವರ್ಣಿಸುತ್ತಾನೆ (II ೩೯ ಗ). ಈ ಪದಪುಂಜದ ವಿಷಯವಾಗಿ ನಡೆದಿರುವ ಚರ್ಚೆಯನ್ನು 'ದೀಪಿಕೆ' ವಿವರಿಸಿದೆ: "ಬಾಳೆಯ ಹೂವಿನ ಮೋತೆಯಂತೆ ಕೆಂಪು ಕಪ್ಪು ಮಿಶ್ರವಾದ" ಎಂದು ಸಮಾಧಾನ ನೀಡಿದೆ. ಇಲ್ಲಿ ಕದಳೀಗರ್ಭ ಎಂದರೆ ಹಣ್ಣಿನ ತಿರುಳು ಭಾಗ (ಸಿಪ್ಪೆ ಸುಲಿದ ಮೇಲೆ ಕಾಣುವ ಒಳಭಾಗ) ಎಂದೇ ಗ್ರಹಿಸಬೇಕೆಂದು ನನಗನಿಸುತ್ತದೆ. ನಾವು ಸಾಮಾನ್ಯವಾಗಿ ತಿನ್ನುವ ಬಾಳೆಕಾಯಲ್ಲಾಗಲಿ ಹಣ್ಣಿನಲ್ಲಾಗಲಿ ಈ ಭಾಗ ಮಾಸಲು ಬಿಳಿ ಬಣ್ಣಕ್ಕಿರುತ್ತದೆ. ಆದರೆ ಶ್ಯಾಮ ಎಂದು ಸ್ಪಷ್ಟವಾದ ವಿಶೇಷಣವಿರುವುದರಿಂದ ಪದಪುಂಜದಲ್ಲಿ ಅಡಗಿರುವ ಒಟ್ಟು ಬಣ್ಣ ಮಾಸಲು ಬಿಳಿ ಆಗದು. ನಡಿಗಟ್ಟಿನ ತಾತ್ಪರ್ಯವನ್ನು 'ಕಪ್ಪುಮಿಶ್ರವಾದ ಬಣ್ಣಗೊಂಡ ಕದಳೀ ಗರ್ಭ' ಎಂದು ನಾನು ಗ್ರಹಿಸುತ್ತೇನೆ. ಏಕೆಂದರೆ ಇಲ್ಲಿ ಪಂಪ ನಿರ್ದೇಶಿಸಿರುವ ಕದಳಿ ನಾವು ಸಾಧಾರಣವಾಗಿ ತಿನ್ನುವ ಹಣ್ಣು ಕದಳಿ ಅಲ್ಲ, ತರಕಾರಿಯಾಗಿ ಉಪಯೋಗಿಸುವ ಕಾಯಿ ಕದಳಿಯೂ ಅಲ್ಲ. ಅವನ ಮನಸ್ಸಿನಲ್ಲಿದ್ದದ್ದು ವನ್ಯ ಕದಳಿ, ಕಾಡುಬಾಳೆ. ಈ ರಖಮು ಹಣ್ಣಿನ ಸಿಪ್ಪೆ ಸುಲಿದಾಗ ನಮ್ಮೆದುರಾಗುವುದು ಕರಿಯ ಬೀಜಗಳ ದಿಂಡು. ಮೆಣಸಿಗಿಂತಲೂ ಗಾತ್ರದಲ್ಲಿ ಹಿರಿಯದಾದ ಬೀಜಗಳು; ಬಿಳಿಯ ಅಂಟುಹಿಟ್ಟು ಬೀಜಗಳನ್ನು ದಿಂಡಾಗಿ ಕೂಡಿಸಿರುವಂತೆ ಕಾಣುತ್ತದೆ. ಇದರಿಂದಾದ ಶ್ಯಾಮಾಭಾಸದಿಂದ ಹಣ್ಣಿನ ಒಳಭಾಗ ಮಾಸಲು ಕಪ್ಪಾಗಿ ಕಾಣುತ್ತದೆ. ಇದೇ ಕದಳೀಗರ್ಭ ಶ್ಯಾಮ ವರ್ಣ, ಅರ್ಜುನನ ಮೈ ಬಣ್ಣ.

ಈ ರಖಮಿನ ಬಾಳೆ ಪೂರ್ವ ಪಶ್ಚಿಮ ಘಟ್ಟಗಳ ಕಾಡಿನಲ್ಲಿ ಹೇರಳವಾಗಿ ಬೆಳೆಯುತ್ತದೆ. ಹೊರನೋಟಕ್ಕೆ ಸಾಧಾರಣ ಬಾಳೆಮರದಂತೆಯೇ ಇರುತ್ತದೆ. ಹಣ್ಣಿನ ರೂಪವಾಗಲಿ ಬಣ್ಣವಾಗಲಿ ಸಾಧಾರಣ ಬಾಳೆಯಂತೆಯೇ ಆದರೂ ನಿಬಿಡವಾದ ಗಟ್ಟಿ ಬೀಜರಾಶಿಯನ್ನು ಒಳಗೊಂಡಿರುತ್ತದೆ.

ತಿನ್ನಲು ಯೋಗ್ಯವಲ್ಲ. ಮಲೆನಾಡು ಪ್ರದೇಶದಲ್ಲಿ ಇದು ಕಲ್ಲುಬಾಳೆ, ಕಲ್ಬಾಳೆ ಎಂಬ ಹೆಸರುಗಳಿಂದ ಪರಿಚಿತವಾಗಿದೆ.

ಮೈಂದವಾಟೆಯೆಂಬೊಂದು ರಖಿಮನ್ನು ಹೆಸರಿಸುತ್ತಾನೆ, ಪಂಪ (ಆ.ಪು. II ೬೮). ಇದೊಂದು ತಿನ್ನಲಯೋಗ್ಯವಾದ ರಖಿಮೆಂದು ತೋರುತ್ತದೆ. ಈ ರಖಿಮು ಇವತ್ತು ಚಲಾವಣೆಯಲ್ಲಿದೆಯೇ ಎಂಬುದನ್ನು ಕುರಿತು ಸಂಶೋಧನೆ ನಡೆಯಬೇಕಾಗಿದೆ.

## ಬಿದಿರು (Bambusa sp)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಬಿದಿರು, ವೇಣು.

ಆಕರ: ವಿ.ವಿ. IV ೮೭ ಗ; IX ೧೦೪ ಗ;

ಪಂಪನ ಕಾಲದಲ್ಲೂ ಪಲ್ಲಕ್ಕಿಯ ದಂಡ್ಗಿಗೆ ಬಿದಿರು ಉಪಯೋಗದಲ್ಲಿತ್ತು. IX ೧೦೪ ಗ ಕುಡಿ ಬಿದಿರು (ಕಳಿಲೆ) ಉಣಿಸಿನ ವಸ್ತುವಾಗಿತ್ತು. ( IV ೮೭ ಗ).ಕಳಿಲೆಯ ಬಳಕೆ ಮೈದಾನ ಪ್ರದೇಶಗಳಲ್ಲಿ ಅಷ್ಟಾಗಿ ಕಾಣದು. ಬಹುಶಃ ಬೆಟ್ಟಗಾಡುಗಳಲ್ಲಿ ಬೆಳೆಯುವ ಬಿದಿರು ಸ್ಪೀಷೀಸುಗಳು ಉತ್ತಮ ರಖಿಮಿನ ಕಳಿಲೆಯನ್ನೀಯಬಹುದು. ಪಂಪನ ಕಾಲದಲ್ಲಿ ಕುಡಿಬಿದಿರಿನಿಂದ ತಯಾರಾದ ಚಕ್ಕಣಗಳು ನಾಲಗೆ ಚಪ್ಪರಿಸುವಂತಿದ್ದಿರಬೇಕು. ಮಂಗರಸನ ಸೂಪಶಾಸ್ತ್ರದಲ್ಲಿ ಚಚ್ಚುಗಳಿಲೆ, ಗಾರಿಗೆಗಳಿಲೆ ಮೊದಲಾದ ೧೩ ಬಗೆಯ ಅಡುಗೆ ವಿಧಾನಗಳನ್ನು ಕಾಣಬಹುದು.

ಕಳಿಲೆಯಿಂದ ತಯಾರಾದ ಅಡುಗೆಯನ್ನು ರುಚಿ ನೋಡುವ ಅವಕಾಶ ನನಗೆ ಒದಗಿಲ್ಲವಾದದ್ದರಿಂದ ಹೆಚ್ಚಿನ ವಿವರಗಳನ್ನು ಕೊಡಲಾರೆ. ಕಳಿಲೆಯ ಆಹಾರಸತ್ವವನ್ನು ಕುರಿತ ವೈಜ್ಞಾನಿಕ ಸಂಶೋಧನೆ ನಡೆದಿಲ್ಲ. ಆದರೆ ಪಿಷ್ಟ ಪದಾರ್ಥಗಳನ್ನು ತಕ್ಕ ಪ್ರಮಾಣದಲ್ಲಿ ಕೊಂಡಿದೆಯೆಂದು ತಿಳಿದು ಬಂದಿದೆ.

## ಬಿಂಬ (Coccinia indica)

ಆಕರ: ವಿ.ವಿ. II ೩೯ ಗ

ಅರ್ಜುನನ ತುಟಿಗಳನ್ನು ತೊಂಡೆಹಣ್ಣಿಗೆ ಹೋಲಿಸಿ ಪಂಪನೂ ಸಂಸ್ಕೃತ ಕವಿಗಳು ಹಾಕಿಕೊಟ್ಟ ಮೇಲ್ಪಂಕ್ತಿಯನ್ನೇ ಅನುಸರಿಸಿದ್ದಾನೆ.

ನಮ್ಮ ಪ್ರಾಚೀನರು ಗಂಡುತುಟಿಗಳಿಗೂ ಹೆಣ್ಣುತುಟಿಗಳಿಗೂ ಸರಿಸಮಾನವಾಗಿ ತೊಂಡೆ ಹಣ್ಣನ್ನು ಹೋಲಿಕೆಯಿಟ್ಟು ಬಿಟ್ಟಿದ್ದಾರೆ. ಈ ಅಲಂಕಾರ ಕವಿಸಮಯವಾಗುವುದಕ್ಕೆ ಮೊದಲೇ ಲಾಕ್ಷಣಿಕರು ವಿಚಾರಮಾಡಿ ನಿಷ್ಕರ್ಷೆ ಮಾಡಲಿಲ್ಲವಲ್ಲಾ ಎಂಬ ಕೊರಗು ನನ್ನನ್ನು ಆಗಾಗ ತಿನ್ನುತ್ತದೆ. ಗಂಡು ಹೆಣ್ಣುಗಳ ಅಂಗಾಂಗ ರಚನೆಯನ್ನು ತಿಳಿದಿದ್ದವರು ಅವರು; ಪಾದಾಂತ ಕೇಶಾದಿ ವರ್ಣನೆಗಳನ್ನು ಮಾಡಿದ್ದಾರೆ; ಒಂದೊಂದು ಅಂಗವನ್ನೂ ಹಳಸುವವರೆಗೂ ವರ್ಣಿಸಿದ್ದಾರೆ. ಆದರೆ ಗಂಡು ತುಟಿಗಳನ್ನೂ ಹೆಣ್ಣುತುಟಿಗಳನ್ನೂ ಒಂದೇ ರಚನೆಯೆಂದು ಏಕೆ ಭ್ರಾಂತರಾದರೋ! ಹೋಗಲಿ, ಅವರು ಒಪ್ಪವಿಟ್ಟಿದ್ದು ತೊಂಡೆಹಣ್ಣಿನ ರೂಪವನ್ನೆ, ಅದರ ಹವಳಗೆಂಪು ಬಣ್ಣವನ್ನೆ, ಅಥವಾ ಎರಡೂ ಗುಣವಿಶೇಷಗಳನ್ನೆ?

ಪಂಪ ತೊಂಡೆಹಣ್ಣನ್ನು ನೇರವಾಗಿ ಕಂಡಿದ್ದನೆ ಎಂಬ ಸಂಶಯ ನನಗಿದೆ. ತೊಂಡೆಹಣ್ಣಿನಂತಿರುವ ದಪ್ಪ ದುಂಡುತುಟಿ (ನನ್ನ ಪ್ರಕಾರ) ಹೆಂಗಸಿಗೆ ಚೆಲುವಲ್ಲ; ಗಂಡಸಿಗೆ ಸಾಧಾರಣವಾಗಿ ಇಂಥ ತುಟಿ ಇರುವುದಿಲ್ಲ. ಹೆಂಗಸಿನ ತುಟಿಬಣ್ಣ ಹವಳದ ಕೆಂಪಾಗಿರಬಹುದಾದರೂ ಗಂಡಸಿನದು ಅದಕ್ಕೆ ಸ್ವಲ್ಪವೂ ಸಾಟಿಯಾಗದು. (ನಾಟಕ ರಂಗದ ಮೇಲೆ ಕಾಣಿಸಿಕೊಳ್ಳುವ ಪೌರಾಣಿಕ ವ್ಯಕ್ತಿಗಳ ತುಟಿಗಳಿಗೆ ಮೆತ್ತಿರುವ ಕೆಂಪು ಬಣ್ಣ ಆ ಮುಖಕ್ಕೆ ಚೆಂದವೆ?-ನೀವೇ ಯೋಚಿಸಿ). ಬಿಂಬಾಧರೆ ಎಂದರೆ ತೊಂಡೆಯ ಹಣ್ಣಿನಂತೆ ತುಟಿಯುಳ್ಳವಳು (ರೂಪ ಮತ್ತು ಬಣ್ಣಗಳೆರಡರಲ್ಲೂ) ಎಂದು ಅರ್ಥಯಿಸಬಹುದೇ ಹೊರತು

ಆಕೆಯ ಮುಖ ಚೆಲುವಾಗಿತ್ತು ಎಂದೇನೂ ಒಪ್ಪಿಕೊಳ್ಳಬೇಕಾಗಿಲ್ಲ. ರೂಪದ ದೃಷ್ಟಿಯಿಂದಾಗಲಿ ಬಣ್ಣದ ದೃಷ್ಟಿಯಿಂದಾಗಲಿ ಗಂಡಸಿಗೆ ಈ ಉಪಮೆ ಸಲ್ಲದು ಎಂದೇ ನನ್ನ ಅಭಿಪ್ರಾಯ.

ತೊಂಡೆಬಳ್ಳಿ ಭಾರತಾದ್ಯಂತ ಬೆಳೆಯುತ್ತದೆ. ವನ್ಯಜಾತಿಯ ಕಾಯಿ ಕಹಿ; ಸಾಗುವಳಿಗೆ ಒಗ್ಗಿದ ರಬಿಮುಗಳಲ್ಲಿ ಕಹಿಯಿಲ್ಲ. ಈ ತರಕಾರಿ ಎಲ್ಲರಿಗೂ ತಿಳಿದದ್ದೇ ಆದರೂ ನಮ್ಮ ಪ್ರಾಚೀನ ಸೂಪಶಾಸ್ತ್ರ ರಸಿಕರು ಇದರ ಹೆಸರನ್ನೇ ಎತ್ತುವುದಿಲ್ಲ. ಬಹುಶಃ ಅನಾಗರಿಕ ತರಕಾರಿ ಎಂಬ ತುತ್ಸಾರವೋ ಏನೋ!

ಪಲ್ಲವರು ರಾಜ್ಯವಾಳಿದ ಪ್ರದೇಶಕ್ಕೆ ತೊಂಡೆಮಂಡಲ ಎಂದು ಹೆಸರು. ತೊಂಡೆಕಾಯಿಬೆಳೆಯುತ್ತಿದ್ದ ಹರವು ಅದು ಎಂಬ ನಂಬಿಕೆಯಿಂದ ರಚಿತವಾದ ಸ್ಥಲಪುರಾಣಗಳು ಕೆಲವಿವೆ.

## ಬೆಳ್ಳುಳ್ಳಿ (Allium sativum)

ಆಕರ: ವಿ.ವಿ. XIII ೭೧ ಗ

ಕೆಲವರಿಗೆ ಬೆಳ್ಳುಳ್ಳಿಯ ವಾಸನೆ ಎಷ್ಟು ಹಿತವೋ ನನ್ನಂಥವರ ಮೂಗಿಗೆ ದ್ವಿಗುಣವಾದ ಶತ್ರು. ಅದೇನು ವಿಚಿತ್ರ ರುಚಿಯೋ ನಮ್ಮದು!–ಹಸಿ ಈರುಳ್ಳಿಯನ್ನು ಕಂಡರೆ ಕಚಕಚ ಕಚ್ಚಿ ತಿನ್ನುತ್ತೇನೆ. ಬೆಳ್ಳುಳ್ಳಿಯ ವಾಸನೆಗೆ ಅಲ್ಲೇ ವಾಂತಿ ಕಕ್ಕುತ್ತೇನೆ.

ಹೆರಡೋಟಸನ ಪ್ರಕಾರ ಪ್ರಾಚೀನ ಈಜಿಪ್ಟಿನಲ್ಲಿ ಬೆಳ್ಳುಳ್ಳಿ ಯಥೇಷ್ಟವಾದ ಉಪಯೋಗದಲ್ಲಿತ್ತು, ಅಲ್ಲಿಯೇ ಕೃಷಿಯಾಗುತ್ತಿತ್ತು. ತೌರೂರಾದ ಮಧ್ಯ ಏಷಿಯಾದಿಂದ ಈಜಿಪ್ಟಿಗೆ ರವಾನೆಯಾಗಿದ್ದಿರಬೇಕು.

ತೌರೂರಿನಲ್ಲಿ ಬೆಳ್ಳುಳ್ಳಿಯ ಹೆಸರು ಶುಮಿನ್, ಶೌಮ್. ಸಂಸ್ಕೃತದ ಲಶುನ ಇದೇ ಬುಡಕಟ್ಟಿಗೆ ಸೇರಿದಪದ. ಈ ಪದದ ರೂಪಾಂತರಗಳೇ ಉತ್ತರ ಭಾರತದ ಭಾಷೆಗಳಲ್ಲೆಲ್ಲ ಪ್ರಚಾರದಲ್ಲಿವೆ. ದ್ರಾವಿಡ ಭಾಷೆಗಳಲ್ಲಿ ವೆಳ್ಳುಳ್ಳಿ, ಬೆಳ್ಳುಳ್ಳಿ, ಬೊಳ್ಳುಳ್ಳಿ ಮೊದಲಾದ ಹೆಸರುಗಳು ಚಲಾವಣೆಯಲ್ಲಿವೆ. ಇವು ಬಿಳಿಯ + ಉಳ್ಳಿ (=ಗಡ್ಡೆ) ಎಂಬ ಎಂಬ ಸಂಯೋಜನೆಯಿಂದ ಉಂಟಾದ ಪದಗಳಂತೆ ಕಾಣುತ್ತವೆ.

ಪಂಪ ಬೆಳ್ಳುಳ್ಳಿಯನ್ನು ತಿಂದಿದ್ದನೋ ಇಲ್ಲವೋ ಹೇಳುವುದು ಸಾಧ್ಯವಿಲ್ಲ. ಅದರ ದುರ್ನಾತವನ್ನಂತೂ ಅರಿತಿದ್ದ. ಹಳೆಯ ಮುಗ್ಗಿದ ಬೇವಿನ ಎಣ್ಣೆಯಲ್ಲಿ ಅದ್ದಿದ ಬೆಳ್ಳುಳ್ಳಿಯನ್ನು ಕೆಂಡದ ಮೇಲೆ ಎಸೆದರೆ ಹೊಮ್ಮುವ ನರಕವಾಸನೆಯನ್ನು ರಣರಂಗದಲ್ಲಿ ಕೊಳೆತ್ತುನಾರುತ್ತಿದ್ದ ಹೆಣದ ವಾಸನೆಗೆ ಒಪ್ಪವಿಟ್ಟಿದ್ದಾನೆ. ಇದೊಂದು ಅದ್ಭುತವಾದ ವರ್ಣನೆ ಎಂದು ನನಗನಿಸುತ್ತದೆ. ಸಾಗರದೊಂದಿಗೆ ಸಾಗರವೇ ಹೋಲಿಕೆ ಎಂದು ವಾಲ್ಮೀಕಿ ಸಾಗರದ ವೈಯಕ್ತಿಕತೆಯನ್ನು ವರ್ಣಿಸಿದ. ಕೊಳೆತು ನಾರುವ ಹೆಣದ ದುರ್ನಾತಕ್ಕೆ ಬೇರೆ ಹೋಲಿಕೆಯೇ ಇಲ್ಲ ಎನ್ನಲಿಲ್ಲ, ಪಂಪ. ಆ ನಾತಕ್ಕಿಂತಲೂ ಕಟುವಾದ ದುರ್ನಾತದ ಹೊಗೆಯೆಬ್ಬಿಸಿದ್ದಾನೆ.

## ಭೂಜ (Betula sp.)

ಆಕರ: ವಿ.ವಿ. V ೫೨, V ೮೦

ಭೂಜ ಪದಕ್ಕೆ 'ಮರ' ಎಂದು 'ದೀಪಿಕೆ' ಅರ್ಥಯಿಸಿದೆ. ಒಂದು ಪ್ರದೇಶದಲ್ಲಿ ಬೆಳೆಯುತ್ತಿದ್ದ ಸಸ್ಯಸಮೂಹದ ಗಿಡಮರಗಳನ್ನು ಹೆಸರಿಸುವ ಪಟ್ಟಿಯಲ್ಲಿ ಈ ಹೆಸರೂ ಸೇರಿಕೊಂಡಿದೆ ಎಂಬುದನ್ನು ಗಮನಿಸಬೇಕು. ಸಂದರ್ಭವಿಶೇಷದಿಂದ 'ಭೂಜ' ಎಂಬುದನ್ನು ಭೂರ್ಜ ಎಂದು ಅರ್ಥಮಾಡಿಕೊಳ್ಳುವುದು ಉಚಿತವಾಗಿದೆ.

ಪ್ರಾಚೀನ ಸಂಸ್ಕೃತ ಕಾವ್ಯಗಳಲ್ಲಿ ಭೂರ್ಜ ಪತ್ರದ ಉಲ್ಲೇಖವಿದೆ. ಇಲ್ಲಿ ಪತ್ರ ಎಂದರೆ ಎಲೆ ಅಲ್ಲ; ಕಾಂಡವನ್ನು ಸುತ್ತಿರುವ ತೊಗಟೆ ಪದರಪದರವಾಗಿ ಹಾಳೆಹಾಳೆಯಾಗಿ ಸಡಿಲವಾಗುತ್ತದೆ. ಕಾಂಡದಿಂದ ಬೇರ್ಪಡಿಸಿದ ಹಾಳೆಯೇ ಪತ್ರ. ಅಲೆಕ್ಸಾಂಡರನು ಭಾರತವನ್ನು ಹೊಕ್ಕಾಗ ಭಾರತೀಯರು ಈ ಹಾಳೆಗಳ ಮೇಲೆ ಮಸಿಯಿಂದ ಬರೆಯುತ್ತಿದ್ದರೆಂದು ಕರ್ಶಿಯಸ್ ಹೇಳುತ್ತಾನೆ. ಉತ್ತರ ಭಾರತದಲ್ಲಿ ಮೊಗಲ ಆಳ್ವಿಕೆ ಆರಂಭವಾಗುವ ವರೆಗೂ ಭೂರ್ಜಪತ್ರ ಬರವಣಿಗೆಯ ಸಾಮಗ್ರಿಯಾಗಿತ್ತು.

ಭೂರ್ಜದಲ್ಲಿ ಅನೇಕ ಸ್ಪೀಷೀಸುಗಳಿವೆ. ಇವುಗಳ ಹರವೆಲ್ಲ ಉತ್ತರ ಶೀತವಲಯದಲ್ಲಿ. ಹಿಮಾಲಯ ಪ್ರದೇಶದಲ್ಲಿ ಕೆಲವು ಸ್ಪೀಷೀಸುಗಳು ಬೆಳೆಯುತ್ತವೆ. ಈ ಮರಗಳ ತೊಗಟೆ ಆನೆಚರ್ಮದಂತೆ ಒರಟೆಂದೂ, ಅದರಿಂದ ಬೇರ್ಪಡಿಸಿದ ಪತ್ರದ ಮೇಲೆ ದೇವಕನ್ನೆಯರು ಪ್ರಣಯ ಪತ್ರಗಳನ್ನು ಬರೆಯುತ್ತಿದ್ದರೆಂದೂ ಕಾಲಿದಾಸನ ಕುಮಾರಸಂಭವ ತಿಳಿಸುತ್ತದೆ. ಭಾರತದ ಮೈದಾನ ಪ್ರದೇಶಗಳಲ್ಲಿ ಭೂರ್ಜ ಬೆಳೆಯದು.

ಉತ್ತಮವಾದ ಚೌಬೀನೆಯನ್ನೀಯುವ ಮರ ಭೂರ್ಜ. ಪಾಶ್ಚಾತ್ಯದೇಶಗಳಲ್ಲಿ ಬಾಹುಳ್ಯದ ಬೆಳೆಯಾಗಿರುವುದರಿಂದ ಕೈಗಾರಿಕೆಗೆ ಒಗ್ಗಿದೆ. ಕುರ್ಚಿ ಮೇಜು ಅಲ್ಮೈರಾಗಳನ್ನು ತಯಾರಿಸುವುದಕ್ಕೆ ಪ್ರಿಯವಾದ ಮರ.

ಆಡುಮಾತಿನ ಇಂಗ್ಲಿಷ್ ಭಾಷೆಯಲ್ಲಿ ಈ ಮರದ ಹೆಸರು ಬರ್ಚ್((birch)); ಯೂರೋಪಿನ ಭಾಷೆಗಳಲ್ಲೆಲ್ಲ ಇದೇ ಹೆಸರಿನ ರೂಪಾಂತರಗಳು ಬಳಕೆಯಲ್ಲಿವೆ. ಯಾವ ರೂಪದಿಂದ ಇನ್ನಾವ ರೂಪ ಹುಟ್ಟಿಕೊಂಡಿತೆಂಬ ಪ್ರಶ್ನೆ ಬಗೆಹರಿಯದ್ದು. ಸಂಸ್ಕೃತದ ಭೂರ್ಜವೂ ಐರೋಪ್ಯ ನುಡಿಗಳ ರೂಪಾಂತರಗಳೂ ಇಂಡೋ– ಆರ್ಯನ್ ಭಾಷಾ ಬುಡಕಟ್ಟಿಗೆ ಸೇರಿದ ಪದ ಎಂದು ಗಣಿಸಲಾಗಿದೆ.

## ಮರುವ (?Origanum majorana)

ಆಕರ: ಆ.ಪು. XI ೧೨೨

ಇದರ ಅನನ್ಯತೆ ತಕರಾರಿನ ವಿಷಯವಾಗಿದೆ. ಇಂದು ನಮಗೆ ಪರಿಚಿತವಾಗಿರುವ ಮರುಗವೇ ಇದು ಎಂದು ಸಾಮಾನ್ಯ ಭಾವನೆ. ಮನೋಹರವಾದ ಗಂಧ, ಪರಿಮಳದಿಂದ ಕೂಡಿದ ಸೌಂದರ್ಯ ಈಗಿನ ಮರುಗಕ್ಕಿರುವುದು ಅದರ ಎಲೆಗಳಲ್ಲಿ, ಹೂಗಳಲ್ಲಲ್ಲ. ಈ ಮರುಗ ಹೂ ತಳೆಯುವುದೇ ಅಪರೂಪ. ಮಧ್ಯ ಏಷಿಯಾ ಪ್ರದೇಶದಿಂದ ಕ್ರಿ.ಶ. ಸುಮಾರು 12/13ನೆ ಶತಮಾನಗಳಲ್ಲಿ ಭಾರತಕ್ಕೆ ಬಂದದ್ದು ಇದು. ಅಂದಿನಿಂದ ಕೃಷಿಗೆ ಒಳಪಟ್ಟಿದೆ. ಹೂ ಬಿಟ್ಟರೂ ಬೀಜ ಬಿಡದು. ನಾರಿನಿಂದಲೇ ಬೆಳೆಹಬ್ಬುತ್ತದೆ.

ಇಂಥ ಸುಗಂಧಗಿಡಕ್ಕೆ ಬಾರದೆ ಕುಸುಮಸಿಚಯವನ್ನು ಹುಡುಕಿಕೊಂಡು ಹೋಗುವ ದುಂಬಿಗಳನ್ನು ಪಂಪನು ಮರುಳು ಎನ್ನುತ್ತಾನೆ. ದುಂಬಿ ಹೂವನ್ನರಸಿಕೊಂಡು ಹೋಗುವುದು ಅದರ ಪರಾಗಕ್ಕೆ, ಹೂವಿನಲ್ಲಿರಬಹುದಾದ್ದ ಮಧುವಿಗೆ; ವಾಸನೆಗಲ್ಲ.

ಪಂಪನ ಮರುವ ಯಾವುದು ಎಂಬುದನ್ನು ಕುರಿತು ಸಂಶೋಧನೆ ನಡೆಯಬೇಕಾಗಿದೆ.

## ಮಲ್ಲಿಗೆ (Jasminum sp.)

ಪಂಪನು ಉಪಯೋಗಿಸಿರುವ ಪರ್ಯಾಯಪದಗಳು: ಮಲ್ಲಿಗೆ, ಪೊಸಮಲ್ಲಿಗೆ, ತೋರಮಲ್ಲಿಗೆ, ದೇವ ಮಲ್ಲಿಗೆ, ನವಮಾಳಿಕಾ

ಆಕರ: ವಿ.ವಿ.I ೫೫ : II ೧೨ : IV ೩೦ : IV ೬೮ ; IV ೧೧೦ ; V ೫ ಗ ;
V ೩೦ ; V ೩೩ ; V ೩೫ ; VII ೮೭
ಆ.ಪು. III ೩೯ ; XI ೮೫ ; XI ೮೭ ; XI ೯೫ ಗ;
XI ೧೦೭; XI ೧೦೮; XI ೧೦೯; XI ೧೧೦; XI ೧೨೨
(ಪ್ರ.ಕ. ಸಂಪುಟ 54, ಪುಟ 16 ನೋಡಿ)

ಬಿರಿದ ಮಲ್ಲಿಗೆಯನ್ನು ಕಂಡಾಗೆಲ್ಲ ಪಂಪನಿಗೆ ಬನವಾಸಿ ದೇಶದ ನೆನಪು ಮರುಕಳಿಸುತ್ತಿತ್ತು (ವಿವಿ. IV ೩೦). ಈ ಗಿಡ ವಸಂತ ಕಾಲದಲ್ಲಿ ಹೂತಳೆಯುತ್ತದೆ (ವಿ.ವಿ. V ೩೫); ಗೊಜ್ಜಗೆ ಮತ್ತು ಸಿಂದೂರ ಹೂಗಳ ಮಿಶ್ರಣ ಕಂಪನ್ನು ಹೊಮ್ಮುತ್ತದೆ (ವಿವಿ. V ೩೦); ಕಾಕಳಿಯೊಳಾಣತಿಗೆಯ್ವ ದುಂಬಿಗಳನ್ನು ಆಕರ್ಷಿಸುತ್ತದೆ. ದುಂಬಿಗಳು ಮಾತ್ರವಲ್ಲ, ಪ್ರಣಯಿಗಳ ಮೇಲೂ ಪರಿಣಾಮ

ಬೀರುತ್ತದೆ. "ಮಲ್ಲಿಗೆಗಳ್ ವಸಂತದೊಳ್ ಬಿರಿದೊಡೆ ನಲ್ಲರ ಮೆಲ್ಲೆರ್ದೆಗಳ್ ನಿರಂತರಂ ಬಿರಿವುದು" (ಆ.ಪು. XI ೧೧೦).ಮಲ್ಲಿಗೆಯ ಕಂಪನವುಂಕುತಿರ್ದ ತೆಂಕಣ ತಂಬೆಲರು ಸುಭದ್ರೆಯನ್ನು ರತಿಹಿಂಸೆಗೊಳಪಡಿಸಿತು(ವಿ.ವಿ. IV ೬೮). ಕುರುಜಾಂಗಣವೆಂಬ ನಾಡಿನಲ್ಲಿ ವಸಂತಕಾಲವಾದ ಮೇಲೆ ಕೂಡ ಮಲ್ಲಿಗೆ ಮುಗಿದು ಹೋಗದು; ಇತರ ಕಾಲಗಳಲ್ಲೂ ಹೂ ಬಿಡುತ್ತಲೇ ಇರುತ್ತದೆ (ವಿ.ವಿ. I ೫೫)

ನಮ್ಮ ಕಾಲದಲ್ಲಿರುವಂತೆಯೇ ಪಂಪನಕಾಲದಲ್ಲೂ ಮಲ್ಲಿಗೆಯ ಅನೇಕ ರಖಮುಗಳಿದ್ದಿರಬೇಕು.– ದೇವಮಲ್ಲಿಗೆ (ಆ.ಪು. XI ೧೦೮), ತೋರಮಲ್ಲಿಗೆ (ವಿ.ವಿ. VII ೮೭) 'ಪೂತ' ಪೊಸಮಲ್ಲಿಗೆ (ವಿ.ವಿ. II ೧೨) ಎನ್ನುತ್ತಾನೆ, ಪಂಪ. ಪೊಸಮಲ್ಲಿಗೆ ಎಂಬ ನುಡಿಕಟ್ಟನ್ನು ಅನೇಕ ಪದ್ಯಗಳಲ್ಲಿ ಉಪಯೋಗಿಸಿದ್ದಾನೆ. 'ಪೊಸ' ಎಂಬ ಪದಕ್ಕೆ ಸಾಮಾನ್ಯವಾಗಿ 'ಹೊಸದಾಗಿ ಅರಳಿದ' ಎಂದು ಅರ್ಥಮಾಡುವುದು ಸಾಧುವೇ ಆಗಿದೆಯಾದರೂ "ಪೂತ ಪೊಸಮಲ್ಲಿಗೆ" (ವಿ.ವಿ. II ೧೨) ಎಂಬ ಪ್ರಯೋಗದಲ್ಲಿ ಪೂತ, ಪೊಸ ಎಂಬ ಮಾತುಗಳು ದ್ವಿರುಕ್ತಿಯಾಗಿವೆ. ಹೀಗಿರುವುದರಿಂದ "ನವಮಾಳಿಕಾಲತೆ"(ಆ.ಪು. XI ೯೫ ಗ) "ಪೊಸಮಲ್ಲಿಗೆ"ಯೂ ಒಂದು ರಖಮಾಗಿರಬಹುದೆ ಎಂಬ ಸಂಶಯವನ್ನು ಎಬ್ಬಿಸುತ್ತದೆ. ಗುಣಾರ್ಣವನು ಇರುಳೆಲ್ಲ ಶಯ್ಯೆಯಲ್ಲಿ ರತಿಕ್ರೀಡೆಯಾಡುತ್ತಿದ್ದು ಬೆಳಗಾದಾಗ, ದೀಪದ ಕುಡಿಗಳು (ಎಣ್ಣೆ ಇಂಗಿ ಹೋಗಿ) ಕಾಂತಿಹೀನವಾದಾಗ (ಅಥವಾ ಬೆಳಗಿನೆದುರಲ್ಲಿ ಕುಡಿಯ ಕಾಂತಿ ಇಂಗಿದಾಗ), ಪೊಸಮಲ್ಲಿಗೆಯ ಕಂಪು ತಂಪುಗಾಳಿಯಲ್ಲಿ ಮೃದುವಾಗಿ ಲೀನವಾದಾಗ (ವಿ.ವಿ. IV ೧೧೦) ಎಂಬ ವರ್ಣನೆಯಿಂದ ಪ್ರಾತಃಕಾಲದಲ್ಲಿ ಅರಳುವ ಮಲ್ಲಿಗೆಯ ರಖಮೇ ಪೊಸಮಲ್ಲಿಗೆ (ನವಮಾಳಿಕಾ) ಎಂದು ಹೆಸರುಗಳಿಸಿರುವಂತೆ ತೋರುತ್ತದೆ.

"ಪದವಿಟ್ಟು ಪೊದಳ್ದ ತೋರಮಲ್ಲಿಗೆ" ಎಂಬ ವರ್ಣನೆಯಿಂದ ತೋರಮಲ್ಲಿಗೆಯೆಂಬುದು ಬೇರೊಂದು ರಖಮನ್ನು ಸೂಚಿಸುತ್ತದೆ. ಪೂರ್ಣಚಂದ್ರನನ್ನು ರಾಹು ನುಂಗಿದಾದ ಬಳಿಕ ಮೆಲ್ಲ ಮೆಲ್ಲಗೆ ಉಗುಳುವ ಹಾಗೆ ತೋರಿತು, ತೋರಮಲ್ಲಿಗೆಯ ದಂಡೆಯನ್ನು ಮುಡಿದ ಊರ್ವಶಿಯ ತುರುಬು (ವಿ.ವಿ. VII ೮೭). ತೋರಮಲ್ಲಿಗೆಯಿಂದ ಪೋಣಿಸಿದ ಸರಿಗೆ ಆಭರಣದಿಂದ ಸುಭದ್ರೆ ಅಲಂಕಾರ ಮಾಡಿಕೊಂಡಿದ್ದಳು (V ೫ ಗ).

ಮಲ್ಲಿಗೆ ಹೂವಿನ ಅರಳುವಿಕೆಯನ್ನು ವೈಜ್ಞಾನಿಕ ರೀತಿಯಲ್ಲಿ ಚಿತ್ರಿಸಿದ್ದಾನೆ, ಪಂಪ (ವಿ.ವಿ. V ೩೩). ಮೊಗ್ಗಿನ ಬಣ್ಣ ಹಸುರು. ಎಂದರೆ ಹೂವಿನ ಇತರ ಭಾಗಗಳನ್ನು ಹಸುರು ಪುಷ್ಪಪಾತ್ರದ ಎಸಳುಗಳು (sepals) ಪೂರ್ಣವಾಗಿ ಮುಚ್ಚಿಕೊಂಡಿವೆ. ("ಪಸುರ್ನನೆಯೊಳಿಡಿಸಿದ ಮಲ್ಲಿಗೆ" ಆ.ಪು. XI ೮೫ ಹೋಲಿಸಿ) ಇಂಥ ಎಳೆಮೊಗ್ಗು ಬೆಳ್ಪಡರುತ್ತದೆ. ಎಂದರೆ ಬೆಳೆವಣಿಗೆಯ ಮುಂದಿನ ಹಂತದಲ್ಲಿ ಪುಷ್ಪಪಾತ್ರದೊಳಗಿಂದ ಬಿಳಿಯ ದಳಸಮೂಹ ಹೊರಕ್ಕೆ ಕಾಣಿಸಿಕೊಂಡು ಬಲ್ಮುಗಳ್ (ಬಲಿತ ಮೊಗ್ಗು) ಆಗುತ್ತದೆ. ಪೊಚ್ಚೆದೋಚ್ಚೆ = ಮೃದುವಾದ ಬಿಳಿದಳಗಳು ಪೊರೆ ಪೊರೆಯಾಗಿ ಅರಳುತ್ತವೆ. ನಡು (ಹೂ ಕಾಂಡ )ಉಬ್ಬುತ್ತದೆ.

"ತಂಬೆಲರ್ ಪೊರೆಪೊರೆಯಂ ಸಡಿಲ್ಚೆ (ತಂಪಾದ ಗಾಳಿ ದಳಗಳನ್ನು ಪದರಪದರವಾಗಿ ಸಡಲಿಸಿತು) ಎನ್ನುತ್ತಾನೆ ಪಂಪ. ಗಾಳಿ ಸುಳಿದಾಗ ಹೂ ಅರಳುತ್ತದೆ ಎಂದು ನಂಬಿರುವವರು ಈಗಲೂ ಇದ್ದಾರೆಯಾದರೂ, ಈ ಅಭಿಪ್ರಾಯಕ್ಕೆ ವೈಜ್ಞಾನಿಕ ಆಧಾರವಿಲ್ಲ. ಹೂವಿನ ಅರಳುವಿಕೆಗೆ ಕಾರಣಗಳೇನೆಂಬುದು ಸಸ್ಯಶಾಸ್ತ್ರದಲ್ಲಿ ಇನ್ನೂ ರಹಸ್ಯವಾಗಿಯೇ ಉಳಿದಿರುವ ಪ್ರಕರಣ. ವಿಜ್ಞಾನಿಗಳಲ್ಲೇ ಭಿನ್ನಾಭಿಪ್ರಾಯಗಳಿವೆಯಾದರೂ ಅರಳುವಿಕೆಯ ಕಾರಣ ಗಾಳಿಯಲ್ಲ ಎಂಬುದನ್ನು ಸಾಮಾನ್ಯವಾಗಿ ಎಲ್ಲರೂ ಒಪ್ಪಿಕೊಂಡಿದ್ದಾರೆ; ಹವಾಗುಣದ ಶೀತೋಷ್ಣಗಳ ಏರಿಳಿತಗಳು ಕಾರಣವಾಗಿರಬಹುದೆಂದು ಊಹಿಸುತ್ತಾರೆ. ಗಿಡದಿಂದ ಬೇರ್ಪಡಿಸಿದ ಮಲ್ಲಿಗೆ ಮೊಗ್ಗು ತುರುಬಿನಲ್ಲಿ ಅರಳುವ ಸಂಗತಿ ಎಲ್ಲರಿಗೂ ತಿಳಿದದ್ದೆ. ಕತ್ತಲಲ್ಲಿಟ್ಟರೂ ಮೊಗ್ಗು ಅರಳುತ್ತದೆ, ಬೆಳಕಿನಲ್ಲೂ ಅರಳುತ್ತದೆ, ಗಾಳಿಯ ಚಲನೆಯಿಲ್ಲದ ವಾತಾವರಣದಲ್ಲೂ ಅರಳುತ್ತದೆ. ಅರಳುವಿಕೆಯ ಸತ್ತ್ವ ಮೊಗ್ಗಿನಲ್ಲೇ ಹವಣಾಗುತ್ತದೆ ಎಂಬುದು ಈಗಿನ ವೈಜ್ಞಾನಿಕರ ಊಹೆ.

## ಮಂದಾರ

ಆಕರ: ವಿ ವಿ XVI ೧೭ ಗ

ಪಾರಿಜಾತದಂತೆ ಇದೊಂದು ಸ್ವರ್ಗೀಯ ಪುಷ್ಪವಾಗಿ ನಮ್ಮ ಪುರಾಣೇತಿಹಾಸ ಕಾವ್ಯಗಳಲ್ಲಿ ಕಾಣಿಸಿಕೊಳ್ಳುತ್ತದೆ. ಅದನ್ನು ಮರ್ತ್ಯಲೋಕದಲ್ಲೂ ಕಾಣಬೇಕೆಂದು ಬಯಸಿದ ನಮ್ಮವರು ಅವರವರಿಗೆ ತೋರಿದ ಗಿಡಗಳಿಗೆ ಈ ಹೆಸರನ್ನು ಕೊಟ್ಟಿದ್ದಾರೆ. ಇದೊಂದು ಬಗೆಯ ಮಲ್ಲಿಗೆ (ಮಂದಾರ ಮಲ್ಲಿಗೆ) ಎನ್ನುವವರಿದ್ದಾರೆ; ಪಾರಿಜಾತವನ್ನೇ ಮಂದಾರ ಎನ್ನುವವರಿದ್ದಾರೆ; ಕಂಚುವಾಳದ ಹೂವೇ ಮಂದಾರ ಎಂದು ಸಾಧಿಸಹೊರಟವರೂ ಇದ್ದಾರೆ. ಹೀಗಾಗಿ ಶಾಸ್ತ್ರೀಯ ಅನನ್ಯತೆಯನ್ನು ನಿರ್ದೇಶಿಸುವುದು ಸಾಧ್ಯವಿಲ್ಲ.

## ಮಾತುಲಂಗ (Citrus sp.)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಮಾತುಲಂಗ, ಮಾತುಳಂಗ, ಲುಂಗ

ಆಕರ: ವಿ.ವಿ. III ೨ ಗ; V ೮೦; V ೮೬
ಆ.ಪು. I ೬೭

ಹಣ್ಣಿನ ಭಾರದಿಂದ ನೆಲವನ್ನು ಮುಟ್ಟುವ ಮಾತುಲಂಗ (ಆ ಪು. I ೬೭). ಇದರಲ್ಲಿ ಉತ್ಪ್ರೇಕ್ಷೆಯಿಲ್ಲ ಹಿಡಿಯನ್ನು ಮೀರಿದ ಗಾತ್ರ, ಅಂಡಾಕಾರ, ತುದಿಯಲ್ಲಿ ಮೂಗಿನಂತೆ ಮುಂಚಾಚಿರುವ ಗುಬುಟು, ಭಾರವಾದ ಹಣ್ಣು ಮಾತುಲಂಗ. ಸಣ್ಣ ಪೊದರು ಮರ, ಹರಡಿಕೊಂಡಿರುವ ರೆಂಬೆಕೊಂಗಳು. ಹೆಚ್ಚು ಕಡಿಮೆ ನಿಂಬೆ ಪೊದರಿನಂತೆ ಕಾಣುತ್ತದೆಯಾದರೂ ಎಲೆಯ ಗಾತ್ರ ದೊಡ್ಡದು, ಹೂವಿನ ರಚನೆಯೂ ಬೇರೆ. ಹಣ್ಣು ತಳೆದ ರೆಂಬೆಕೊಂಬೆಗಳು ಇನ್ನಷ್ಟು ಬಾಗಿ ನೆಲಮಟ್ಟದಲ್ಲಿ ಒರಗಿರುತ್ತವೆ. ಸಾಮಾನ್ಯವಾಗಿ ಮಲೆಗಾಡುಗಳಲ್ಲಿ ಬೆಳೆಯುತ್ತದೆ.

ಅರ್ಜುನನನ್ನು ಎದುರುಗೊಳ್ಳಲು ಬಂದ ಪಟ್ಟಣಿಗರು ತಂದಿದ್ದ ಮಂಗಳವಸ್ತುಗಳಲ್ಲಿ ಮಾತುಲಂಗವೂ ಒಂದಾಗಿತ್ತು (ವಿವಿ. III ೨ ಗ). ಹಣ್ಣಿನ ಬಣ್ಣ ಹಸುರು ಮಿಶ್ರವಾದ ತಿಳಿಹಳದಿ; ಗುಬುಟು ಮೈ, ದಪ್ಪ ಸಿಪ್ಪೆ, ಬಿಳಿ ಬಣ್ಣ; ತಿರುಳು ಸಣ್ಣ. ತಿನ್ನುವ ಭಾಗ ಬಿಳಿಯ ಸಿಪ್ಪೆ. ಇದು ನವುರಾದ ಮಧುರವಾಸನೆಯುಳ್ಳದ್ದು, ತಿಳಿಯಾದ ಸಿಹಿರುಚಿಯುಳ್ಳದ್ದು. ಆದರೆ ಕಚಕಚವೆಂದು ಅಗಿದಗಿದು ತಿನ್ನಬೇಕು, ಹಸಿ ಸೌತೆಕಾಯನ್ನು ತಿಂದಹಾಗೆ. ಹಣ್ಣಿಗೆ ಮೃದುತ್ವವಿಲ್ಲ.

ಮಾತುಲಂಗ ರಸಾಯನವೆಂಬ ಆಯುರ್ವೇದ ಔಷಧ ಪ್ರಾಚೀನಕಾಲದಿಂದಲೂ ಹೆಸರು ಪಡೆದದ್ದು. ಗರ್ಭಿಣಿಯರಿಗೂ ಬಾಣಂತಿಯರಿಗೂ ರಕ್ತವೃದ್ಧಿ ಮಾಡಿಸುತ್ತದೆಯಂತೆ. ಇದೊಂದೂ ಅಲ್ಲದ ಹೆಂಗಸರೂ ಗಂಡಸರೂ ಕೂಡ ಸೇವಿಸಬಹುದು.

ಪಾಶುಪತಾಚಾರ್ಯ ಲಕುಲೀಶನ ಪ್ರತಿಮೆಯ ಎಡ ಕೆಳಗೈಯಲ್ಲಿ ಅಂಡಾಕಾರದ ವಸ್ತುವೊಂದು ಸಾಮಾನ್ಯವಾಗಿ ರೂಪಿತವಾಗಿದೆ. ಪುರಾತತ್ತ್ವ ಸಂಶೋಧಕರು ಇದನ್ನು ಮಾತುಲಂಗ ಫಲ ಎನ್ನುತ್ತಾರೆ. ಲಕುಲೀಶ–ಪಾಶುಪತಕ್ಕೂ ಈ ಹಣ್ಣಿಗೂ ಯಾವ ನಂಟೂ ಕಾಣದು. ಪಾಶುಪತ ಸೂತ್ರಗಳಲ್ಲೆಲ್ಲೂ ಮಾತುಲಂಗದ ಉಲ್ಲೇಖವಿಲ್ಲ. ಲಕುಲೀಶನ ಕೈಲಿರುವ ವಸ್ತು ಲಿಂಗವೇ ಆಗಿರಬೇಕೆಂಬುದು ನನ್ನ ಅಭಿಪ್ರಾಯ. ಹೀಗೆ ಗ್ರಹಿಸಿದರೆ ಪಾಶುಪತದ 'ಲಿಂಗಧಾರೀ' ಎಂಬ ಸೂತ್ರದ ಮೇಲೆ ಸ್ಪಷ್ಟವಾದ ಬೆಳಕು ಚೆಲ್ಲುತ್ತದೆ.

ದಾಳಿಂಬವನ್ನು ತಮಿಳರು ಮಾತುಲಂಗ, ಮಾದಾಳ ಎನ್ನುತ್ತಾರೆ. ಇದು ಸರಿಯಲ್ಲ. ಈಗಿನ ಕನ್ನಡದಲ್ಲಿ ಮಾದಾಳ ಮಾತುಲಂಗವನ್ನೇ ಸೂಚಿಸುತ್ತದೆ. ಮಾದಾಳದ ಪೂರ್ವರೂಪ ಮಾದೀಳೆ ಎಂದಿರಬಹುದೆ ಎಂಬ ಸಂದೇಹ ಬಲವಾಗಿದೆ. ಏಕೆಂದರೆ ಕಿತ್ತೀಳೆ, ಹೇರೀಳೆ ಮೊದಲಾದ ಪದಗಳಂತೆ ಮಾದೀಳೆಯೂ ಈಳೆ (ನಿಂಬೆ) ಜಾತಿಯ ಸಸ್ಯವರ್ಗಕ್ಕೆ ಸೇರಿದ್ದೆಂಬುದನ್ನು ಸೂಚಿಸುತ್ತದೆ.

## ಮಾವು (Mangifera indica)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಮಾ, ಮಾವು, ಚೂತ, ಸಹಕಾರ, ಆಮ್ರ.

ಆಕರ: ವಿ.ವಿ. I ೫೫ ; II ೯೨ ಗ ; II ೧೩ ; II ೧೪ ; II ೧೫ ;
III ೪೦ ಗ ; III ೪೧ ; III ೭೫ ; IV ೨೦ ; IV ೨೮ ;
IV ೮೭ ಗ ; V ೩ ; V ೧೧ ; V ೧೯ ;V ೨೨ ;
V ೩೨ ; V ೮೨ ; XIV ೧೨ ; XIV೧೩

ಆ.ಪು. I ೬೫ ; I ೬೬ ; XI ೬೮ ; XI ೭೩ ಗ ; XI ೮೧ ;
XI೮೫ ; XI ೮೬ ; XI ೮೭ ; XI ೯೪ ; XI ೯೮ ;
XI ೧೧೧ ; XII ೧೭

(ಪ್ರ ಕ. ಸಂಪುಟ ೫೪, ಪುಟ ೧೦ ನೋಡಿ)

ಮಾವಿನ ಮರವನ್ನು ಕುರಿತ ಉಲ್ಲೇಖಗಳು ಪಂಪನ ಕಾವ್ಯಗಳಲ್ಲಿ ಸಾಮಾನ್ಯವಾಗಿ ಕಾಣಬರುತ್ತವೆ. ಇದರಿಂದ ಪಂಪನಿಗೆ ಅತ್ಯಂತ ಪ್ರಿಯವಾದದ್ದು ಮಾವು ಎಂದು ನಿರ್ಣಯ ಮಾಡುವ ವಿಮರ್ಶಕರಲ್ಲಿ ನಾನೊಬ್ಬ ಅಲ್ಲ. ಪಂಪ ಸಸ್ಯಪ್ರಿಯ, ಯಾವಗಿಡದ ಚೆಲುವಿಗಾದರೂ ಅವನ ಕವಿಹೃದಯ ಮಿಡಿಯುತ್ತದೆ. ಒಂದೇ ಒಂದು ಪದ್ಯದಲ್ಲಿ ಸುರಹೊನ್ನೆಯ ಸೌಂದರ್ಯರಸವನ್ನು ಹಿಂಡಿಟ್ಟಿರುವ ಪಂಪನಿಗೆ ಆ ಹೂ ಅತ್ಯಂತ ಪ್ರಿಯವಲ್ಲವೆಂದು ಹೇಳಲಾದೀತೆ? ಪುನರುಕ್ತಿಯನ್ನು ಕವಿಯ ಪ್ರಿಯತೆಯ ಅಳತೆಗೋಲಾಗಿ ಹಿಡಿಯುವುದು ತಕ್ಕುದಲ್ಲವೆಂದು ನನ್ನ ಭಾವನೆ.

ಮರವನ್ನು ಕುರಿತು ಪಂಪನಾಡಿರುವ ಮಾತುಗಳು ಸ್ವತಂತ್ರವಾಗಿವೆಯೆಂಬುದರಲ್ಲಿ ಸಂದೇಹ ಬೇಡ. ಆದರೆ ಒಂದೇ ಭಾವವನ್ನು ತಿರುಗಿತಿರುಗಿಯೂ ಬಳಸಿದ್ದಾನೆ ಎಂಬುದನ್ನು ಒಪ್ಪಿಕೊಳ್ಳಬೇಕು. ಚೈತ್ರಾಗಮನವಾದಾಗಲೆಲ್ಲ ಚೂತಾಗಮನವಾಗುತ್ತದೆ; ಆದಿಮೂರ್ತಿ ವಸಂತದೂತಿಯಾದಂತೆ ಮಾವು ವಸಂತದೂತನಾಗಿ ಬಿಟ್ಟಿದ್ದಾನೆ! ತಾನು ಪ್ರತ್ಯಕ್ಷನಾದಾಗೆಲ್ಲ ದುಂಬಿ ಹಿಂಡನ್ನು ಕೂಡಿಕೊಂಡೇ ಬರುತ್ತಾನೆ! ಈ ಚರ್ವಿತಚರ್ವಣ ಪ್ರಯೋಗ ಸ್ವಲ್ಪ ಬೇಜಾರು ಹಿಡಿಸುತ್ತದೆ.

ಆದರೆ ಒಂದು ಮಾತು. ಮಾವನ್ನು ಎಷ್ಟು ಬಣ್ಣಿಸಿದರೂ, ಎಷ್ಟು ಹೊಗಳಿದರೂ ಪಂಪನಿಗೆ ತೃಪ್ತಿಯಿಲ್ಲ. ಕೆಲವು ಸಂದರ್ಭಗಳಲ್ಲಿ ಹೊಗಳುಭಟ್ಟ ವೃತ್ತಿಯನ್ನು ಕೈಕೊಂಡಿರುವನೋ ಎಂಬ ಸಂದೇಹ ಮೂಡುತ್ತದೆ. ಕೆಂದಳಿರ ಎಳಮಾವು, ಪೊಸನನೆ, ಪೊಸಮಾವು, ನವಚೂತ ಪಲ್ಲವ ಅಂಕುರ ಪಲ್ಲವ, ಕುಸುಮಾಳಂಕಾರದ ಚೂತ, ನನೆದೋಱಿದ ಮಾಮರ, ಚೂತಪಲ್ಲವ, ಸೊಗಯಿಸಿ, ಬಂದ ಮಾಮರ, ಪೊಳೆವ ಮಾವಿನ ತಳಿರ್, ತಳಿರ್ತೆಳೆಮಾವು, ಮೊದಲಾದ ನುಡಿಗಟ್ಟುಗಳು ಪದೇ ಪದೇ ನಮ್ಮ ಕಣ್ಣೆದುರು ಬಂದು ನಿಂತು ಮೆಗಟು ತಂದಿವೆಯೆಂದೇ ಹೇಳಬೇಕು. ಕೆಲವು ಸಂದರ್ಭಗಳಲ್ಲಿ ಮಾತ್ರ ಔಚಿತ್ಯಪೂರ್ಣವಾದ ಪದಪುಂಜಗಳು ಪಂಪನ ಕವಿತಾವರ್ಚಸ್ಸಿನ ಕಿಡಿಗಳಾಗಿವೆ. ಬಸಂತದೊಳ್ ಬಸದಿಯ ಬಾಗಿಲಂ ತೆಱೆದ ಮಾಟ್ಕೆಯೊಳಿರ್ದವು ಬಂದ ಮಾವುಗಳ್ (ಆ.ಪು. I ೬೬); ಅಂಕುರ ಪಲ್ಲವ ಕುಸುಮಾಳಂಕಾರದ ಚೂತಲತಿಕೆ ನರ್ತಕಿವೋಲ್ (ಆ.ಪು. XI ೯೪); ಮಾವಿನ ಕೋಡೆ ಕೋಡಾಗಿರೆ ಕೋಡುಗೊಂಡು ಪರಿದತ್ತು ವಸಂತಗಜಂ (ವಿ.ವಿ. II ೧೫)

ಮಾವಿನ ಚಿಗುರಿಗೆ ಮನಸೋತ ಪಂಪ ಅದರ ಹಣ್ಣಿಗೂ ಮಿಡಿಗಾಯಿಗೂ ನಾಲಗೆ ಚಪ್ಪರಿಸಿದ್ದಾನೆ. ತನಿವಣ್ಣಾಗಿರ್ದುದಿಮ್ಮಾವು (ಆ.ಪು. XI ೬೮). ಕುರುಜಾಂಗಣದಲ್ಲೂ ಮಲಯಪರ್ವತದಲ್ಲೂ ಬಂದ (ಹಣ್ಣುತಳೆದ) ಮಾವು ಬೀಯದು (ಮುಗಿದು ಹೋಗದು); ಸರ್ವಋತುಗಳಲ್ಲೂ ಹೂಕಾಯಿಹಣ್ಣುಗಳನ್ನು ಉತ್ಪತ್ತಿ ಮಾಡುತ್ತಲೇ ಇರುತ್ತದೆ. "ಕುಡಿ ಬಿದಿರ ಕುಡಿಯ ಮಾವಿನ ಮಿಡಿಯ ಮಾರುಡಿನ ಮೆಣಸುಗಡಲೆಯ ಪುಡಿಯೊಳಡಸಿದಲ್ಲವಲ್ಲಣಿಗೆಯ ಚಕ್ಕಣಂಗಳಂ" ವರ್ಷಪೂರ ಸವಿಸವಿದು ಸುಖಪಡಬಹುದು (ವಿ.ವಿ. IV ೮೭ ಗ). ಕಣ್ಣು ಬಾಯಿ ಮನಗಳಿಗೆ ಇಂಬುಗೊಡುವ

ಮಾವಿನ ಮರಕ್ಕೆ ಪಂಪ ಅಚ್ಚದೇಸಿಯ ಅಲೆಗಳಲ್ಲಿ ಹರಿಯುವ ಚೆಲುವಾದ ಪದ್ಯವೊಂದರಲ್ಲಿ ಅಂಜಲಿ ಸಲ್ಲಿಸಿದ್ದಾನೆ:

> ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀಂ ನೀಜನೈ ಪುಷ್ಪಸಂ
> ಕುಳದೊಳ್ ನೀನೆ ವಿಲಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ ಪಣ್ತ ಪ
> ಣ್ಗಳಿನೇನೋವೋ ಪೆಜಶೇನೊ ನೀನೆ ಭುವನಕ್ಕಾರಾಧ್ಯನೈ ಭೃಂಗ ಕೋ
> ಕಿಳ ಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ
>
> (ಆ.ಪು. XI ೯೮)

## ಮಾರುಡ

ಆಕರ: ವಿ.ವಿ. IV ೮೭ ಗ

ಮಾರುಡಿನ, ಮಾರುದಿನ, ಮಾರುತಿನ ಎಂಬ ಪಾಠಾಂತರಗಳಲ್ಲಿ ಮೊದಲನೆಯದನ್ನು ಸ್ವೀಕರಿಸಿ ಕೊಂಡು ಅದಕ್ಕೆ "ಬಿಲ್ವಪತ್ರೆಕಾಯಿಯ ತಿರುಳಿನ" ಎಂಬ ಅರ್ಥವನ್ನು 'ದೀಪಿಕೆ' ಕೊಟ್ಟಿದೆ. ಪರಿಷತ್ತಿನ ಆವೃತ್ತಿಯು 'ಮಾರುದಿನ' ಎಂಬ ಪಾಠಾಂತರವನ್ನು ಒಪ್ಪಿಕೊಂಡು ಅರ್ಥಕ್ಕೆ ಪ್ರಶ್ನೆಯ ಚಿಹ್ನೆಯನ್ನು ಹಾಕಿದೆ.

ಶಿವನಿಗೆ (ಮಾರುಡ) ಪ್ರಿಯವಾದದ್ದು ಬಿಲ್ವ, ಮಾರುಡವೇ ಬಿಲ್ವಪತ್ರೆಯಾಗಿರಬೇಕು ಎಂಬ ತರ್ಕದಿಂದ 'ದೀಪಿಕೆ' ಅರ್ಥಮಾಡುವಂತಿದೆ. ಪಂಪನ ಕಾಲದ ಕರ್ನಾಟಕದಲ್ಲಿ ಬಿಲ್ವಕ್ಕೂ ಶಿವನಿಗೂ ನಂಟು ಬಿದ್ದಿತ್ತೆಂದು ತಿಳಿಯುವುದಕ್ಕೆ ಸಕಾರಣಗಳಿಲ್ಲ.

ಬಿಲ್ವ ಹಣ್ಣಿನ ತಿರುಳನ್ನು (ಬೇಲ ಹಣ್ಣಿನ ತಿರುಳಿನಂತೆ) ತಿನ್ನುವ ಬಳಕೆಯೇನೋ ಪ್ರಾಚೀನ ಕಾಲದಲ್ಲಿತ್ತು. ಆದರೆ ಅದು ಬಹುವಾಗಿ ವೈದ್ಯದಲ್ಲಿನ ವ್ಯವಧಾನ. ಮಂಗರಸನ ಸೂಪಶಾಸ್ತ್ರದಲ್ಲಿ ಬಿಲ್ವದ ತಿರುಳಿನಿಂದ ಪಾನಕ ತಯಾರಿಸುವ ಕ್ರಮವನ್ನು ವಿವರಿಸಲಾಗಿದೆ. ಪಂಪನ ಚಕ್ಕಣಗಳಲ್ಲಿ ಇದು ಸೇರಿತ್ತು ಎಂದು ತಿಳಿಯುವುದಕ್ಕೂ ಆಧಾರವಿಲ್ಲ. ಏಕೆಂದರೆ ಮದ್ಯ ಕುಡಿಯುವ ಸಂದರ್ಭದಲ್ಲಿ ನಡು ನಡುವೆ ಇನ್ನೊಂದು ಪಾನೀಯವನ್ನು ಕುಡಿಯುವ ಬಳಕೆ ಅಸಂಭವ. ಯಾವ ಚಕ್ಕಣವಾದರೂ ಅಗೆದು ತಿನ್ನುವ ಚಿರುದಿಂಡಿಯಾಗಿರಬೇಕೆಂದು ನನ್ನ ಗ್ರಹಿಕೆ.

## ಮೆಣಸು (Piper nigrum)

ಆಕರ: ವಿ.ವಿ. IV ೮೭ ಗ

ಪ್ರಾಚೀನ ಕಾಲದಿಂದಲೂ ದಕ್ಷಿಣ ಭಾರತದ ಪಶ್ಚಿಮ ಘಟ್ಟಗಳಲ್ಲಿ (ಮುಖ್ಯವಾಗಿ ಮಲಬಾರು ಪ್ರದೇಶ) ಬೆಳೆಯುವ ಸಾಂಬಾರ ದಿನಸು ಇದು.

ಕ್ರಿಸ್ತಶಕದ ಮೊದಲ ಶತಮಾನಗಳಲ್ಲಿ ಮೆಣಸು ಕೊಟ್ಟನಾರ (ಕುಡನಾಡು?)ದಲ್ಲಿ ಮಾತ್ರ ಬೆಳೆಯುತ್ತಿತ್ತೆಂದು ಪೆರಿಪ್ಲಸಿನಲ್ಲಿ ಉಲ್ಲೇಖವಿದೆ. ಅದೇ ಕಾಲದ ಇತರ ಗ್ರೀಕ್ ಬರಹಗಳಿಂದ ಈ ಸರಕು ಪಶ್ಚಿಮ ಕರಾವಳಿಯ ಇನ್ನು ಕೆಲವು ಬಂದರುಗಳಿಂದಲೂ ಮೆಡಿಟರೇನಿಯನ್ ಪ್ರದೇಶಗಳಿಗೆ ಸಾಗಾಣಿಕೆ ಯಾಗುತ್ತಿತ್ತೆಂಬ ಸಂಗತಿ ತಿಳಿಯುತ್ತದೆ.

ಮೆಣಸಿನ ವನ್ಯನೆಲೆ ಭಾರತದಲ್ಲೆಲ್ಲೂ ಇಲ್ಲ. ಕ್ರಿಸ್ತಪೂರ್ವ ಶತಕಗಳಲ್ಲಿ ಈ ಸರಕು (ಮೆಣಸುಕಾಳು) ಕಡಲ ವಾಣಿಜ್ಯದ ವಸ್ತುಗಳಲ್ಲೊಂದಾಗಿತ್ತು. ಪೆಸಿಫಿಕ್ ದ್ವೀಪಗಳಿಂದ ದಕ್ಷಿಣ ಭಾರತದ ಮೂಲಕ ಪಾಶ್ಚಾತ್ಯ ದೇಶಗಳಿಗೆ ರವಾನೆಯಾಗುತ್ತಿತ್ತು. ಹೀಗೆ ಮೊದಲು ನಮಗೆ ಪರಿಚಯವಾದದ್ದು ಒಣ ಮೆಣಸುಕಾಳು. ಕ್ರಿಸ್ತಯುಗಾರಂಭ ಶತಕಗಳಲ್ಲಿ ಸಾಗುವಳಿ ಆರಂಭವಾಗಿರಬಹುದೆಂದು ನನ್ನ ತಿಳಿವಳಿಕೆ.

ಪಂಪನು ಮೆಣಸುಗಡಲೆ ಎನ್ನುತ್ತಾನೆ. 'ದೀಪಿಕೆ' ಇದನ್ನು ಮೆಣಸು ಮತ್ತು ಕಡಲೆ ಎಂದು ಒಡೆಯುತ್ತದೆ. ಇದು ಸರಿಯೇ ಇರಬಹುದು. ಮೆಣಸಿನ ಕಡಲೆ (=ಕಾಳು) ಎಂದು ಅರ್ಥಯಿಸ ಬಹುದಾದರೆ ಒಣಮೆಣಸು ಎಂದಾಗುತ್ತದೆ.

## ಮೊಲ್ಲೆ (Jasminum auriculatum)

ಆಕರ: ವಿ.ವಿ. II ೯

ಆ ಪು. XI ೧೧೪

(ಪ್ರ.ಕ. ಸಂಪುಟ ೫೪, ಪುಟ ೧೮ ನೋಡಿ)

ಮೊಲ್ಲೆಗೂ ಮಲ್ಲಿಗೆಗೂ ಸಸ್ಯಶಾಸ್ತ್ರದಲ್ಲಿ ಅನ್ಯೋನ್ಯ ಸಂಬಂಧವಿದೆ. ಎರಡು ಗಿಡಗಳೂ ಒಂದೇ ಜೀನಸಿನ ಬೇರೆ ಬೇರೆ ಸ್ಪೀಷೀಸುಗಳು. ಸ್ಥೂಲ ನೋಟಕ್ಕೆ ಎರಡು ಗಿಡಗಳೂ ಒಂದೇ ಮಾದರಿ ಕಾಣುವ ಪೊದರು. ಮಲ್ಲಿಗೆ ರಖಮುಗಳಲ್ಲಿ ಕೆಲವು ಬೆಳಗ್ಗೆ ಅರಳುತ್ತವೆ, ಕೆಲವು ಸಂಜೆ ಅರಳುತ್ತವೆ, ಕೆಲವು ಇರುಳಿನಲ್ಲಿ ಅರಳುತ್ತವೆ. ಮೊಲ್ಲೆ ಮಧ್ಯಾಹ್ನದಲ್ಲಿ ಬಿರಿಯುತ್ತದೆ. ಮೊಲ್ಲೆಮೊಗ್ಗು ದುಂಡುಮಲ್ಲಿಗೆಗಿಂತಲೂ ಉದ್ದುದ್ದವಾಗಿದ್ದು ಚೂಪು ಮೊನೆಗೊಂಡಿರುತ್ತದೆ. ಈ ರೂಪಸಾದೃಶ್ಯವನ್ನು ಪಂಪ ಅರ್ಜುನನ ಹಲ್ಲುಗಳಿಗೆ ಒಪ್ಪವಿಟ್ಟಿದ್ದಾನೆ (ವಿ.ವಿ. II ೯) ಅವನು ಹೇಳುವಂತೆ ಸಮೃದ್ಧವಾಗಿ ಹೂಬಿಟ್ಟು (free flowering) ಕಂಗೊಳಿಸುವ ಪೊದರು ಮೊಲ್ಲೆ. ಮನ್ಮಥನ ನಲ್ಲಂಬುಗಳಿಗೆ ಒಪ್ಪಿದ ಮೊಲ್ಲೆ (ಆ.ಪು.XI ೧೧೪)

## ಯವ (Hordeum sativum)

ಆಕರ: XV ೩೧

ದಕ್ಷಿಣ ಭಾರತಕ್ಕೆ ಅಷ್ಟಾಗಿ ಪರಿಚಯವಿಲ್ಲದ ಧಾನ್ಯ ಇದು. ಇಂಗ್ಲಿಷಿನಲ್ಲಿ ಬಾರ್ಲಿ ಎನ್ನುತ್ತಾರೆ.

ವೇದಕಾಲದಲ್ಲಿ ಬಹುಮುಖ್ಯವಾಗಿದ್ದ ಧಾನ್ಯ ಯವ. ನಾವು ಈಗ ಅಕ್ಕಿಯನ್ನು ಉಪಯೋಗಿಸುವ ರೀತಿಯಲ್ಲಿ, ಔತ್ತರೇಯರು ಗೋಧಿಯನ್ನು ಉಪಯೋಗಿಸುವ ರೀತಿಯಲ್ಲಿ, ಅಂದಿನ ಜನ ಬಳಸುತ್ತಿದ್ದರು. ಸ್ವರ್ಗದಲ್ಲಿ ಜನಿಸಿದ ಚಿರಂಜೀವಿಗಳಲ್ಲಿ ಯವ ಒಂದು ಎನ್ನುತ್ತದೆ, ಅಥರ್ವವೇದ. ಯವದ ಹಿಟ್ಟಿನಿಂದ ಅಪೂಪ ತಯಾರಾಗುತ್ತಿತ್ತು. ಕಾಳನ್ನು ಹುರಿದು ಅರಳು ಮಾಡುತ್ತಿದ್ದರು; ಯವಾಗು, ಯಾವಕ ಎಂಬ ಗಂಜಿರಖಮುಗಳನ್ನು ಕಾಯಿಸುತ್ತಿದ್ದರು.

ಪಂಪನ ಕಾಲಕ್ಕೆ ಯವ 'ಧಾನ್ಯನಿಚಯ'ದೊಂದಿಗೆ ಸೇರಿತ್ತಾದರೂ ಅದರ ಉಪಯೋಗ ಕರ್ನಾಟಕದಲ್ಲಿತ್ತೇ ಎಂಬ ಸಂದೇಹ ಇದ್ದೇ ಇದೆ. ಈಗಂತೂ ಇಲ್ಲ.

## ಲವಲೀ

ಆಕರ: ವಿ.ವಿ. V ೮೦ ; V ೮೭

ಈ ಗಿಡವನ್ನು 'ದೀಪಿಕೆ' ನೆಲ್ಲಿ ಎಂದಿದೆ. ವನವರ್ಣನೆಯಲ್ಲಿ ಪಂಪನು ಲವಲೀ ಪದವನ್ನು ಶಬ್ದಾಲಂಕಾರ ದೃಷ್ಟಿಯಿಂದ ಬಳಸಿರುವಂತಿದೆ. ಅನನ್ಯತೆಯನ್ನು ಕಂಡು ಹಿಡಿಯುವುದಕ್ಕೆ ಒದಗುವ ಯಾವ ಸೂಚನೆಯೂ ಇಲ್ಲ. ಸದ್ಯಕ್ಕೆ ಪ್ರಶ್ನಾರ್ಥಕವಾಗಿಯೇ ಉಳಿದಿದೆ.

## ಲವಂಗ (Eugenia caryophyllata)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಲುಂಗ, ಲವಂಗ

ಆಕರ: ವಿ.ವಿ. V ೮೭

ಆ.ಪು. XVI ೫೨

ಈ ಸರಕನ್ನು ಕುರಿತು ಪಂಪ ಯಾವ ವಿವರಣೆಯನ್ನೂ ಕೊಟ್ಟಿಲ್ಲ. ಒಂದುಕಡೆ ಗಿಡಗಳ ಪಟ್ಟಿಯಲ್ಲಿ ಇರುಕಿಸಿದ್ದಾನೆ. (ವಿ.ವಿ. V ೮೩). ಇನ್ನೊಂದು ಕಡೆ ಪರಿಮಳದ್ರವ್ಯಗಳ ಪಟ್ಟಿಯಲ್ಲಿ ಸೇರಿಸಿದ್ದಾನೆ. (ಆ.ಪು. XVI ೫೨)

ಚರಕ ಸುಶ್ರುತರ ಕಾಲದಿಂದಲೂ ಔಷಧೀಯ ಗುಣಗಳಿಂದಾಗಿ ಪ್ರಸಿದ್ಧಿ ಪಡೆದಿದೆ, ಲವಂಗ. ಪೆಸಿಫಿಕ್ ಸಾಗರದ ಮೊಲಕ್ಕ ಮತ್ತು ಅದರ ಸುತ್ತುಮುತ್ತಲಿನ ದ್ವೀಪಗಳಲ್ಲಿ ಮಾತ್ರ ಲವಂಗ ಸ್ವಾಭಾವಿಕವಾಗಿ ಬೆಳೆಯುತ್ತದೆ. ಇಲ್ಲಿಂದ ಒಣ ಲವಂಗಮೊಗ್ಗು ಪ್ರಾಚೀನ ಕಾಲದಿಂದಲೂ ಏಷಿಯ ಯುರೋಪು ನಾಡುಗಳಿಗೆ ಕಡಲು ವ್ಯಾಪಾರದ ಮೂಲಕ ಪರಿಚಯವಾಯಿತು. ಕ್ರಿ.ಶ. ೧೮ನೆ ಶತಮಾನದ ವರೆಗೂ ಲವಂಗದ ಬೆಳೆ ತೌರನ್ನು ಬಿಟ್ಟಿದ್ದಿಲ್ಲ. ಮೊಟ್ಟಮೊದಲು ಫ್ರೆಂಚರು ತೌರಿನಿಂದ ಸಾಗಿಸಿಕೊಂಡು ಹೋಗಿ ವೆಸ್ಟ್ ಇಂಡೀಸ್ ದ್ವೀಪಗಳಲ್ಲಿ ಬೆಳೆಸಿದರು. ಅಲ್ಲಿಂದ ಆಫ್ರಿಕದ ಜಾಂಜಿಬಾರಿಗೂ ಹಬ್ಬಿತು. ಇಂದಿಗೂ ಲವಂಗ ಭಾರತಕ್ಕೆ ಆಮದು ಸರಕಾಗಿಯೇ ಇದೆ.

ದುರ್ವಾಸನೆಯನ್ನು ಹೀರುವ ಗುಣ ಲವಂಗಕ್ಕಿದೆಯೆಂಬ ಸಂಗತಿ ಬಹಳ ಹಳೆಯದು. ಕ್ರಿ.ಪೂ ೩ನೆಯ ಶತಮಾನದ ಚೈನದಲ್ಲಿ ರಾಜಾಜ್ಞೆಯೊಂದಿತ್ತು: "ಆಸ್ಥಾನಕ್ಕೆ ಬರುವ ಅಧಿಕಾರಿಗಳು ಯಾವಾಗಲೂ ಬಾಯೊಳಗೆ ಲವಂಗವನ್ನಿಟ್ಟುಕೊಂಡು ಮಾತನಾಡಬೇಕು."

## ಶಮಿ (Prosopis spicigera)

ಆಕರ: ವಿ.ವಿ. VIII ೧೦೦

ಈ ಮರ ವೇದಕಾಲದಿಂದಲೂ ಪರಿಚಿತವಾಗಿದೆ. ಆ ಕಾಲದ ಜನ ಬೆಂಕಿಯನ್ನು ಕಡೆಯುವುದಕೆ ಶಮಿಯ ಅರಣಿಗಳನ್ನು ಉಪಯೋಗಿಸುತ್ತಿದ್ದರು. ಸ್ರುಯ, ಮೇಕ್ಷಣ, ಧೃಷ್ಟಿ ಮೊದಲಾದ ಯಜ್ಞೋಪಕರಣಗಳನ್ನು ಶಮಿ ಚೌಬೀನೆಯಿಂದ ನಿರ್ಮಿಸಿಕೊಳ್ಳುತ್ತಿದ್ದರು.

'ವಿಕ್ರಮಾರ್ಜುನ ವಿಜಯ'ದ ಪಾಂಡವರು–ಮಹಾಭಾರತದಲ್ಲಿರುವಂತೆಯೇ–ಅಜ್ಞಾತವಾಸಕ್ಕೆ ಹೊರಟಾಗ ತಮ್ಮ ಆಯುಧಗಳನ್ನು ಶಮೀವೃಕ್ಷದ ಮೇಲೆ ಮೂಟೆಕಟ್ಟಿಟ್ಟಿದ್ದರು. ಹೇಡಿತನದಿಂದ ಹಿಂದೋಡುತ್ತಿದ್ದ ಉತ್ತರನನ್ನು ಅರ್ಜುನ ಹಿಡಿದುಕೊಂಡು ಬಂದು, ಅವನ ಕೈಯಿಂದ ಆಯುಧಗಳನ್ನು ಕೆಳಗಿಳಿಸಿಕೊಳ್ಳುತ್ತಾನೆ.

ಶಮಿ ಅಸಾಧ್ಯವಾದ ಮುಳ್ಳು ಮರ. ಬೊಬ್ಬುಳಿಯ ಜಾತಿಗೆ ಸೇರಿದ್ದು. ಭಾರತಾದ್ಯಂತ ಕುರುಚಲು ಕಾಡುಗಳಲ್ಲಿ ಬೆಳೆಯುತ್ತದೆ. ಮಾನವನ ಉಪಯೋಗಕ್ಕೆ ಅಷ್ಟೇನೂ ಒಗ್ಗಿಲ್ಲ; 'ಜಂಗ್ಲಿ' ಮರವಾಗಿಯೇ ಉಳಿದಿದೆ. ಆದರೆ ವಿಜಯದಶಮಿಯ ದಿನ ಶಮಿಗೆ ಎಂದೂ ಇಲ್ಲದ ಗೌರವ ಸಲ್ಲುತ್ತದೆ. (ಹಳೆಯ) ಮೈಸೂರಿಗರಿಗೂ ವಿಜಯನಗರದ ಚರಿತ್ರೆಯನ್ನು ಬಲ್ಲವರಿಗೂ ಬನ್ನಿಮಂಟಪವೂ ವಿಜಯದಶಮಿಯ ರಾಜವೈಭವವೂ ಪರಿಚಯವಾದವೇ. ಶಮಿಯೇ ಬನ್ನಿ. ತಮಿಳಿನಲ್ಲಿ ವನ್ನಿ. ಇವೆರಡೂ ಸಂಸ್ಕೃತದ ವಹ್ನಿ(=ಅಗ್ನಿ)ಯ ಅಪಭ್ರಂಶ ರೂಪಗಳು. ಹೀಗೆ ವೇದಸಂಸ್ಕೃತಿಯ ಅವಶೇಷವೂ ಮಹಾಭಾರತ ಸಂಸ್ಕೃತಿಯ ಅವಶೇಷವೂ ಇಂದಿಗೂ ಶಮಿಯನ್ನು ಅಂಟಿಕೊಂಡಿದೆ.

## ಶರ

ಆಕರ: ವಿ.ವಿ. II ೮೩

ಕೃಪ ಹುಟ್ಟಿದ್ದು ಶರಸ್ತಂಬದಲ್ಲಿ. ಭೀಷ್ಮ ಮಲಗಿದ್ದು ಶರಶಯ್ಯೆಯಲ್ಲಿ. ಪೌರಾಣಿಕ ವ್ಯಾಖ್ಯಾನಕಾರರು ಶರ ಎಂಬುದಕ್ಕೆ ಬಾಣ ಎಂದು ಅರ್ಥ ಹೇಳಿದ್ದಾರೆಯಾದರೂ, ಜೊಂಡು ಎಂಬ ಅರ್ಥವನ್ನು ನಾನು ಒಪ್ಪಿಕೊಂಡಿದ್ದೇನೆ.

ಸೈಪರೇಸಿ ಎಂಬ ಬಳಗಕ್ಕೆ ಸೇರಿದ ಸಾವಿರಾರು ಸ್ಪೀಷೀಸುಗಳನ್ನೆಲ್ಲ ಒಟ್ಟಾಗಿ ಹೆಸರಿಸಬೇಕಾದರೆ ಇಂಗ್ಲಿಷಿನಲ್ಲಿ ಸೆಡ್ಜ್ (sedge)ಎನ್ನುತ್ತಾರೆ. ಈ ಸಂದರ್ಭಕ್ಕೆ ಜೊಂಡು ಎಂಬ ಪದ

ಸಮಂಜಸವಾಗಿದೆ. ಎಂದರೆ, ಜೊಂಡಿನಲ್ಲಿ ನೂರಾರು ಜೀನಸುಗಳಿವೆ; ನಿರ್ದಿಷ್ಟವಾಗಿ ಯಾವುದಿರ ಬಹುದು ಎಂದು ತಿಳಿಯಲಾಗದು.

ಜೊಂಡು ಜಲಾನೆಲದ ಮೇಲೂ, ಜೌಗು ನೆಲದ ಮೇಲೂ ಕೆರೆಕುಂಟೆಗಳಲ್ಲೂ ಬೆಳೆಯುತ್ತದೆ; ಭಾರತಾದ್ಯಂತ ದೊರಕುತ್ತದೆ. ತುಂಗೆಗಡ್ಡೆ ಎಂಬ ಜಾತಿ ಪರಿಮಳಗೊಂಡದ್ದು: ಗಂಧಯುಕ್ತಿಗ್ರಂಥ ಗಳಲ್ಲಿ ಉಲ್ಲೇಖಗೊಂಡಿದೆ. ನೀರಿನಲ್ಲಿ ಬೆಳೆಯುವ ಜೊಂಡು ಸ್ಪೀಷೀಸುಗಳು ೧೦–೧೨ ಅಡಿ ಎತ್ತರ ಬೆಳೆಯುತ್ತವೆ. ನಾವು ಉಪಯೋಗಿಸುವ ಚಾಪೆಗಳು ಈ ಕಾಂಡಗಳಿಂದ ಸೃಜನಗೊಳ್ಳುತ್ತವೆ. ಬುಟ್ಟಿ ಮಕ್ಕರಿಗಳನ್ನೂ ತಯಾರಿಸುತ್ತಾರೆ.

## ಶಾಲ್ಮಲಿ (Bombax malabaricum)

ಆಕರ: ಆಪು II ೨೬ ; V ೮೫ ಗ

ವೇದಕಾಲದ ಜನಕ್ಕೆ ಪರಿಚಯವಾಗಿದ್ದ ಮರ ಶಾಲ್ಮಲೀ (ಬೂರುಗ). ಮದುವಣಿಗರ ಮೆರವಣಿಗೆಗೆ ಬೂರುಗ ಮರದಿಂದ ನಿರ್ಮಿತವಾಗಿದ್ದ ರಥ ಬೇಕಿತ್ತು.

ಅಲ್ಲಿಂದೀಚೆಗೆ ಸಂಸ್ಕೃತಕಾವ್ಯಗಳನ್ನು ಹೊಕ್ಕಿತು. ಮರದ ಹಿರಿಯ ಗಾತ್ರವೂ,ಹಿರಿಯ ಕೆಂಪು ಹೂಗಳೂ ಕವಿಗಳನ್ನು ಆಕರ್ಷಿಸಿತು. ಮರ ಒಂದು 'ಪ್ರತಿಮೆ'ಯಾಯಿತು:

ಮರಗಟ್ಟೆಂಬಂತೆ ಸುತ್ತುಂ ಮೊದಲೊಳಜಗರಂ ಸುತ್ತೆ ದಿಕ್ಚಕ್ರವಾಳಾಂ
ತರಮಂ ನೋಡಲ್ಕೆ ನೀಳ್ದಂತಿರೆ ಬೆಳೆದ ಮಹಾಶಾಖೆಗಳ್ ತಾಂಡವಾಡಂ
ಬರದೊಳ್ ನಾನಾವಿಧಂ ನರ್ತಿಪ ನಟನ ಭುಜಾದಂಡಮೋ ಪೇಟಿಮೆಂಬಂ
ತಿರಮೇಯಸ್ಕಂಧಮುಂ ಸಂಧಿಸೆ ಜರಠ ಮಹಾಶಾಲ್ಮಲೀ ವೃಕ್ಷಮಿರ್ಕುಂ
(ಕರ್ಣಾಟಕ ಕಾದಂಬರೀ)

ಸೊಗಸಾಗಿ ಒಪ್ಪುವ ವರ್ಣನೆ ಇದು. ತಮಿಳು ಸಂಘ ಕವಿಗಳು ಬೂರುಗದ ಒಂದೊಂದು ಅಂಗ ವನ್ನೂ ಸಹಜಕವಿದೃಷ್ಟಿಯಿಂದ 'ಪ್ರತಿಮೆ'ಯಿಟ್ಟು ವರ್ಣಿಸಿದ್ದಾರೆ (ಪ್ರಕಟವಾಗಲಿರುವ 'ಹಸುರು ಹೊನ್ನು' ಪುಸ್ತಕವನ್ನು ನೋಡಿ).

ಫಾಲ್ಗುಣದಲ್ಲಿ ಎಲೆ ಉದುರಿ ಮರ ನಗ್ನವಾಗುತ್ತದೆ. ಚೈತ್ರದಲ್ಲಿ ಮೊದಲು ಕೊನರುವುದು ಹೂ. ರೆಂಬೆ ಕೊಂಬೆಗಳ ಮೇಲೆಲ್ಲ ಕೆಂಪು ಹೂಗಳು ಬಿರಿದು ಸಾವಿರಾರು ಸೊಡರುಗಳು ಉರಿಯುವಂತೆ ಭಾಸವಾಗುತ್ತದೆ. ಹೂ ಉದುರುವ ಹೊತ್ತಿಗೆ ಚಿಗುರೆಲೆಗಳು ತಲೆದೋರಿ ಹಸುರೆಲೆಯ ಹೊದಿಕೆಯು ನಗ್ನತೆಯನ್ನು ಮುಸುಕುತ್ತದೆ.

ಬೂರುಗದ ಹಣ್ಣಿನಿಂದ ಉತ್ಪತ್ತಿಯಾದ ಹತ್ತಿಗೆ ನೂಲಾಗಿಯೋ ಬಟ್ಟೆಯಾಗಿಯೋ ಅನು ವಾಗುವ ಯೋಗ್ಯತೆಯಿಲ್ಲ. ದಿಂಬನ್ನೂ ಸುಪ್ಪತ್ತಿಗೆಯನ್ನೂ ತುಂಬುವುದಕ್ಕೆ ಉಪಯೋಗವಾಗುತ್ತದೆ. ಚೌಬೀನೆ ಬಲು ಪೆಡಸು, ಹಗುರ. ಪ್ಲೈವುಡ್ ಹಲಗೆಗಳಿಗೂ ಬೆಂಕಿಕಡ್ಡಿಗಳಿಗೂ ಒದಗುತ್ತದೆ.

## ಶಾಲಿ (Oryza sativa)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಶಾಳಿ, ಶಾಲಿ.

ಆಕರ: ವಿ.ವಿ. I ೫೨ ; I ೫೪ ; I ೬೦ ; III ೨೨ ; VII ೭೦
ಆ.ಪು. I ೬೦ ; I ೬ ಗ ; XV ३ ಗ

ಪಂಪನ ಕಾಲದ ಕನ್ನಡ ನಾಡಿನಲ್ಲಿ ಬತ್ತದ ಅನೇಕ ರಖಮುಗಳು ಬೆಳೆಯುತ್ತಿದ್ದವು: ಶಾಳಿ, ಗಂಧಶಾಳಿ, ವ್ರೀಹಿ, ಷಷ್ಟಿಕಾ, ಕಳಮ, ನೀವಾರ ರಖಮುಗಳು ಅವನ ಕಾಲಕ್ಕೂ ಹಿಂದೆಯೇ ಪರಿಚಿತ ವಾಗಿದ್ದವು. ಶಾಳಿ ರಖಮು ಮಾಗಿಯಕಾಲದಲ್ಲಿ ನಾಟಬೇಕಾದ್ದೆಂದೂ, ಷಷ್ಟಿಕಾ ರಖಮು

೬೦ ದಿನಗಳಲ್ಲಿ ಕುಯ್ಲಿಗೆ ಒದಗುವುದೆಂದೂ ಪಾಣಿನಿಯ ಹೇಳಿಕೆ. ಸುಶ್ರುತ, ಅವನ ಕಾಲದ ಬತ್ತದ ರಖಮುಗಳನ್ನು ಶಾಲಿ, ವ್ರೀಹಿ ಮತ್ತು ಷಷ್ಟಿಕಾ ಎಂಬ ಮೂರು ಗುಂಪುಗಳಲ್ಲಿ ವಿಂಗಡಿಸಿದ್ದಾನೆ; ಕಳಮ ರಖಮು ಶಾಲಿ ಗುಂಪನ್ನು ಸೇರಿದ್ದು. ನೀವಾರ ಎಂಬುದು ವನ್ಯಜಾತಿಯ ಬತ್ತ.

ಸುಗಂಧಕವೆಂಬೊಂದು ರಖಮನ್ನು ಸುಶ್ರುತ 'ಶಾಲಿ' ಗುಂಪಿನಲ್ಲಿ ಸೇರಿಸಿದ್ದಾನೆ. ತರುವಾಯದ ಕಾಲದಲ್ಲಿ ಇದೇ ಗಂಧಶಾಲಿಯಾಗಿರಬಹುದೆಂದು ನನ್ನ ಊಹೆ. ಮಳೆಯಿಂದಲೇ ಸಾಗುವಳಿಯಾಗುವ ರಖಮು ಇದು ಎಂದಿದ್ದಾನೆ ಪಂಪ (ವಿ.ವಿ. I ೫೪). ಬತ್ತದ ತೆನೆಯ ಬಣ್ಣ ಹೊನ್ನಿನ ಕೆಂಪು ಎಂದಿದ್ದಾನೆ (ವಿ.ವಿ. I ೫೨; ಆ.ಪು. I ೬೦ ). "ಪೊಸ ನೈದಿಲ ಕಂಪನೆ ಬೀಱಿ ಕಾಯ್ತು" (ವಿ.ವಿ. I ೫೨) ಎಂದು ವಿಶ್ಲೇಷಿಸಿದ್ದಾನೆ. ಎಂದರೆ ಹೊಸತಾಗಿ ಅರಳಿದ ನೆಯ್ದಿಲು ಹೂವಿನ ವಾಸನೆಗೊಂಡಿದ್ದ ಗಂಧಶಾಳಿ. ವಿ.ವಿ.VII ೭೦ನೆ ಪದ್ಯವನ್ನು ಕುರಿತು ಸುಗಂಧದ ಬತ್ತ ಎನ್ನುತ್ತದೆ 'ದೀಪಿಕೆ'. ಇಲ್ಲೊಂದು ನವುರನ್ನು ಗಮನಿಸಬೇಕು:-(ಸು)ಗಂಧವಿರುವುದು ಬತ್ತದಲ್ಲಿ ಅಲ್ಲ, ಬತ್ತವನ್ನು ಕುಟ್ಟಿ ಮಾಡಿದ ಬೆಂದ ಅಕ್ಕಿಯಲ್ಲಿ. ಅನ್ನದ ಪರಿಮಳವನ್ನು ಬತ್ತದ ಗಿಡಕ್ಕೇ ಅನ್ವಯಿಸುವುದೂ ಒಂದು ಬಗೆಯ ಕಾವ್ಯಾಲಂಕಾರವಾಗಬಹುದಲ್ಲವೆ? (ಚಂದನ ನೋಡಿ).

ಹೊನ್ಗೆಂಪು ಬಣ್ಣಕ್ಕೆ ಮಾಗಿರುವ ಬತ್ತದ ತೆನೆಯನ್ನು ತಳೆದ ಗಂಧಶಾಳಿ ಗಿಡ ಪೂರ ಹೊಂಬಣ್ಣಕ್ಕೆ ತಿರುಗುತ್ತದೆ: ಹೀಗೆ ವರ್ಣಮಾರ್ಪಾಟು ಹೊಂದಿ ಮಗಮಗಿಪ ಗಂಧಶಾಳಿಯಿಂದಲ್ಲಿ ಸುಳಿಯುವ (ಹಸುರು) ಗಿಳಿವಿಂಡಿನೋಳಿ ಹಾರಾಡುತ್ತಿದೆ. (ವಿ.ವಿ.III ೨೨). ಈ ಬಣ್ಣಗಳ ಹಿಂದೆ ಸ್ವಚ್ಛ ನೀಲಾಕಾಶದ ತೆರೆ. ಚೌಕಟ್ಟೊಂದನ್ನು ಅಳವಡಿಸಿದರೆ ಸುಂದರವಾದ ವರ್ಣಚಿತ್ರ ಪಟವಾಗುತ್ತದೆ!

ಪಂಪನ ಕಾಲದ ಗಂಧಶಾಳಿ ಕಣ್ಮರೆಯಾಗಿಲ್ಲ. ಇವತ್ತಿಗೂ ಕನ್ನಡ ಕರಾವಳಿ ಪ್ರದೇಶಗಳಲ್ಲಿ ಕೃಷಿಯಾಗುತ್ತಿದೆ.

## ಸಪ್ತಚ್ಛದ (Alstonia scholaris)

ಆಕರ: ಆ.ಪು. XIII ೧೧

ಏಳೆಲೆಯೊಂಗೆಯ ಗೆಣ್ಣುಗಳಿಂದ ಸಾಮಾನ್ಯವಾಗಿ ಏಳು ಎಲೆಗಳು ಹರಡುತ್ತವೆಯಾದದ್ದರಿಂದ ಮರವನ್ನು ಸಪ್ತಚ್ಛದ ಎಂದರು. ತಮಿಳಿನಲ್ಲಿ ಏಳಿಲೈಪಾಲ ಎನ್ನುತ್ತಾರೆ. ಮರದ ಚೌಬೀನೆ ಹಗುರವಾಗಿರುವುದರಿಂದ ಡಕ್ಕಿತಮಟೆಗಳ ತಯಾರಿಕೆಗೆ ಒಗ್ಗಿದೆ. ಬಹುಶಃ ಈ ಜಾಡನ್ನು ಹಿಡಿದು ಕನ್ನಡದಲ್ಲಿ ಮದ್ದಳೆಮರ ಎಂಬ ಹೆಸರು ಸಂದಿದೆ.

ಪಶ್ಚಿಮ ಘಟ್ಟಗಳ ನಿತ್ಯಹಸಿರು ಕಾಡುಗಳಲ್ಲಿ ಬೆಳೆಯುವ ಹೆಮ್ಮರ. ೪೦–೫೦ ಅಡಿ ಎತ್ತರ ಬೆಳೆದು ೮–೧೦ ಅಡಿ ಸುತ್ತಳತೆಯನ್ನು ತಾಳುತ್ತದೆ. ತುಂಬುಎಲೆಹೊದಿಕೆಯಿಂದ ಕೂಡಿ ಸುಂದರವಾಗಿರುತ್ತದೆ. ಟೊಂಗೆಯ ತುದಿಯಿಂದ ಹೂಗೊಂಚಲು ಕೊರುತ್ತದೆ; ಸಣ್ಣ ಹೂ, ಮಾಸಲು ತಿಳಿಹಸುರು ಬಣ್ಣ, ಅಂಥದೇನೂ ಆಕರ್ಷಣೆಯಿಲ್ಲ. ಕಾಯಿಗಳು ೨೦–೨೫ ಅಂಗುಲ ಉದ್ದ ಬೆಳೆದು ಕುಚ್ಚುಗಳಲ್ಲಿ ತೊಂಗುತ್ತವೆ. ಮರಕ್ಕೆ ಅಲಂಕಾರದಂತಿರುತ್ತವೆ.

ಹಳೆಯ ಕಾಲದ ಬಂಗಾಳದಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಸಪ್ತಚ್ಛದದ ಟೊಂಗೆಯನ್ನು ಕೊಡುವ ಸಂಪ್ರದಾಯವಿತ್ತಂತೆ (ಈ ಸಂಗತಿ ನೇರವಾಗಿ ನನಗೆ ತಿಳಿಯದು). ಲಾತಿನ್ ನಾಮದ್ವಯದ ಸ್ಕೊಲಾರಿಸ್ ಎಂಬ ಪದದ ಆಯ್ಕೆಗೆ ಈ ಬಳಕೆಯೇ ಕಾರಣವಾಗಿರಬಹುದು.

## ಸರಳ

ಆಕರ: ವಿ.ವಿ. V ೫೨

'ದೀಪಿಕೆ' ಇದನ್ನು ತೇಗದ ಮರವೆಂದು ತಿಳಿಸುತ್ತದೆ. ಪಂಪನ ಪ್ರಕಾರ ಈ ಮರ ಯಮುನಾ ನದೀ ತೀರದಲ್ಲಿ ಬೆಳೆಯುತ್ತಿತ್ತು (ವಿ.ವಿ. V ೫೦). ಈ ಪ್ರದೇಶದಲ್ಲಿ ತೇಗ (Tectona granisd)ದ ಸ್ವಾಭಾವಿಕವಾದ ಬೆಳವಣಿಗೆಯಿಲ್ಲ, ನೆಡುತೋಪು ಬೆಳೆಯೂ ಇಲ್ಲ.

ಸರಳ ಪದವನ್ನು ನಾಮಪದವಾಗಿ ಗಣಿಸಬೇಕೇ ಅಥವಾ ತಮಾಳದ ಗುಣವಾಚಕವಾಗಿ ಗಣಿಸಬೇಕೆ ಎಂಬ ಸಂದೇಹ ಇದ್ದೇ ಇದೆ. ಗುಣವಾಚಕವಾದರೆ 'ನೆಟ್ಟಗೆ ಬೆಳೆಯುವ ತಮಾಳ' ಎಂದು ಗ್ರಹಿಸಬೇಕಾಗುತ್ತದೆ. ಒಂದು ವೇಳೆ ನಾಮಪದವನ್ನಾಗಿಯೇ ಗ್ರಹಿಸಿದರೆ ಅದು ತೇಗ ಎಂದು ಅರ್ಥಯಿಸುವುದಕ್ಕೆ ಆಧಾರಗಳು ಸಾಲವು.

## ಸಿರಿಸ (Albizzia lebbeck)

ಆಕರ: ಆ.ಪು. XI ೧೦೨

ಸಿರಿಸವು ಸಂಸ್ಕೃತ ಶಿರೀಷದ ತದ್ಭವವಾಗಿರಬೇಕೆಂದು ನನಗೆ ತೋರುತ್ತದೆ. ಸರಿಸದ ಬಾಸಿಗ ಎನ್ನುತ್ತಾನೆ, ಪಂಪ. ಹೂಗಳಿಂದ ಆಭರಣಗಳನ್ನು ಮಾಡಿಕೊಂಡು ಧರಿಸುವುದು ಪಂಪನ ಕಾಲದಲ್ಲಿ ಸಾಧಾರಣ ಬಳಕೆಯಾಗಿತ್ತೆಂದು ತೋರುತ್ತದೆ. ಸರಿಸಮರ ಆಡುಮಾತಿನಲ್ಲಿ ಬಾಗೆ (ಕನ್ನಡ), ವಾಗೈ (ತಮಿಳು) ಎಂದು ಪರಿಚಿತವಾಗಿದೆ.

ಪ್ರಾಚೀನ ತಮಿಳುನಾಡಿನಲ್ಲಿ 'ವಾಗೈ ಶೂಟ್ಟುದಲ್' ಎಂಬೊಂದು ಪದ್ಧತಿಯಿತ್ತು. ಯುದ್ಧದಲ್ಲಿ ಗೆದ್ದ ವೀರನ ತಲೆಗೆ ಬಾಗೆ ಹೂವಿನ ಮಾಲೆಯನ್ನು ಗೌರವಾರ್ಥವಾಗಿ ಮುಡಿಸುತ್ತಿದ್ದರು. ಯುದ್ಧಪ್ರಕರಣದಲ್ಲಲ್ಲದಿದ್ದರೂ ಅಲಂಕಾರಪ್ರಿಯತೆಯಿಂದ ಸಿರಿಸದ ಬಾಸಿಗವನ್ನು ತೊಡುವ ಬಳಕೆ ಪಂಪನ ಕಾಲದಲ್ಲಿ ಇದ್ದಿರಬಹುದು.

ಬಾಗೆ ಮರ ದಕ್ಷಿಣ ಭಾರತದ ಮೈದಾನ ಪ್ರದೇಶಗಳಲ್ಲಿ ಬೆಳೆಯುತ್ತದೆ. ಹೂ ಸಣ್ಣ, ಮಾಸಲು ಬಿಳಿ ಬಣ್ಣ. ತನಿಹೂವಿಗಾಗಲಿ ಹೂಗುತ್ತಿಗಾಗಲಿ ಆಕರ್ಷಕತೆಯಿಲ್ಲ. ಮರವು ಸಾಧಾರಣ ರಚಿಮಿನ ಚೌಬೀನೆಯನ್ನೊದಗಿಸುತ್ತದೆ; ಬಾಗಿಲು, ಕದ, ಅಟ್ಟದ ಹಲಗೆ ಮೊದಲಾದವುಗಳಿಗೆ ಉಪಯೋಗವಾಗುತ್ತದೆ.

## ಸಲ್ಲಕಿ (Feronia elephantum)

ಆಕರ: ವಿ.ವಿ. I ೧೧೫

ಇದು ಬೇಲ್ದದ ಮರ. ಆನೆಬೇಲವೆಂದೂ ಕೆಲವೆಡೆ ಪ್ರಚಾರದಲ್ಲಿದೆ. ಆನೆಗೆ ಬೇಲದ ಹಣ್ಣು ಪ್ರಿಯವಾದ ತಿನಿಸು ಎಂಬುದರಲ್ಲಿ ಅತಿಶಯೋಕ್ತಿಯಿಲ್ಲ. ಚಿಪ್ಪನ್ನು ಒಡೆಯದೆಯೇ ಆನೆಯು ಹಣ್ಣನ್ನು ನುಂಗುವುದೆಂದೂ, ತಿರುಳನ್ನು ಮಾತ್ರ ಜೀರ್ಣಿಸಿಕೊಂಡು ಚಿಪ್ಪನ್ನು ಹಾಗೆಯೇ ಲದ್ದಿಯ ಮೂಲಕ ಹೊರಗಾಗಿಸುವುದೆಂದೂ ದಂತಕತೆಯಿದೆ. ಒಡೆಯದ ಹಣ್ಣನ್ನು ಬಾಯಲ್ಲಿ ಹಾಕಿಕೊಳ್ಳುವುದೇನೋ ನಿಜವೇ. ಆದರೆ ಹಲ್ಲುಗಳಿಂದ ಅದನ್ನು ನಸುಕಿ ಅಗೆದು ನುಂಗುತ್ತದೆ.

ಸಾಧಾರಣವಾಗಿ ಮೈದಾನ ಪ್ರದೇಶಗಳಲ್ಲೂ ಸಮುದ್ರಮಟ್ಟದಿಂದ ೩೦೦೦ ಅಡಿ ಎತ್ತರ ಉಳ್ಳ ಕಾಡುಗಳಲ್ಲೂ ಬೇಲ ಬೆಳೆಯುತ್ತದೆ. ಹಣ್ಣಿನ ತಿರುಳು ಅಡುಗೆಮನೆಯಲ್ಲೂ ಆಯುರ್ವೇದದಲ್ಲೂ ಉಪಯೋಗವಾಗುತ್ತದೆ.

## ಶಾಲ (Shorea robusta)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಶಾಲ, ಸಾಲ, ಸಾಳ.

ಆಕರ: ವಿ.ವಿ. I ೬೮; VII ೭೬; VIII ೪೫ ಗ
ಆ.ಪು. XI ೯೫ ಗ

ಭೀಷ್ಮನು ಸಾಲವೃಕ್ಷದಂತೆ ಪ್ರಾಂಶು (ಎತ್ತರ)ವಾಗಿದ್ದ (ವಿ.ವಿ. I ೬೮). ಬರಸಿಡಿಲಿನಿಂದ ಕಡೆದ ಸಾಲವೃಕ್ಷದಂತೆ ವಜ್ರಕಾಯರಾಗಿದ್ದರು, ಕೃತಾಂತನಂದನನ ನಾಲ್ಕು ತಮ್ಮಂದಿರು (ವಿ.ವಿ. VIII ೪೫ ಗ). ಎತ್ತರವಾಗಿ ಘನವಾಗಿ ಆಜಾನುಬಾಹುವಾಗಿ ಬೆಳೆದುನಿಂತ ಸಾಲತರು ಪಂಪನಿಗೆ ಮಹಾಪುರುಷ ಲಕ್ಷಣವನ್ನು ನೆನಪು ತಂದಿತು.

ವಿ.ವಿ. VII ೬೬ನೆ ಪದ್ಯದ "ಸಾಳ ತಮಾಳ ಕಾನನ......" ಎಂಬಲ್ಲಿ ಮಾತ್ರ ಸಾಳಪದಕ್ಕೆ 'ದೀಪಿಕೆ'ಯು ತೇಗ ಎಂಬ ಅರ್ಥವನ್ನು ಇತ್ತಿದೆ. ಇದು ಸರಿಯಲ್ಲ. ಈ ವೃತ್ತದಲ್ಲಿ ಳಕಾರವನ್ನು ದ್ವಿತೀಯಾಕ್ಷರ ಪ್ರಾಸವನ್ನಾಗಿ ಬಳಸಿಕೊಂಡಿರುವುದರಿಂದ ಸಾಲ (ಶಾಲ) ಸಾಳವಾಗಿ ಪರಿಣಮಿಸಿದೆ. ಹೀಗೆಯೇ ಪದಲಾಲಿತ್ಯಕ್ಕಾಗಿ "ವಿನಿರ್ಜಿತಾಳಿ ಮಾಲಾ ವಿಳಾಸ ಸಾಳಕಾನನೆಯುರ್ ಸಾಳಕಾನನಂಗಳುಮಂ" ಎಂಬ ಪದಪುಂಜದಲ್ಲೂ (ಆ.ಪು. XI ೯೫ ಗ) ಳಕಾರ ಪ್ರಯೋಗ ನಡೆದಿದೆ.

ಪಂಪನಿಗೆ ಪರಿಚಿತವಾಗಿದ್ದ ವೆಂಗಿಪಟು ಪ್ರದೇಶದಲ್ಲಿ ಸಾಧಾರಣವಾಗಿ ಬೆಳೆಯುವ ಮರ ಸಾಲ. (ಅವನಿಗೆ ಪ್ರಿಯವಾದ ಬನವಾಸಿಯಲ್ಲಿ ಈ ಮರ ಬೆಳೆಯದು). ಉತ್ತಮವಾದ ಚೌಬೀನೆಯನ್ನೊದಗಿಸುತ್ತದೆ; ಅರಗುಹುಳುವಿನ ವ್ಯವಸಾಯಕ್ಕೆ ತಕ್ಕ ಮಟ್ಟಿನ ಆಶ್ರಯಕೊಡುತ್ತದೆ. ಪ್ರಾಚೀನ ಬೌದ್ಧರಿಗೆ ಪವಿತ್ರವಾಗಿದ್ದ ಮರ ಇದು. ಬುದ್ಧನು ದೇಹತ್ಯಾಗ ಮಾಡುವಾಗ ಹೂಮಳೆಗರೆಯುತ್ತಿದ್ದ ಸಾಲಮರದ ಕೆಳಗೆ ಪ್ರಶಾಂತನಾಗಿ ಮಲಗಿಕೊಂಡನಂತೆ.

### ಸಿಂದೂರ

ಆಕರ: ವಿ.ವಿ. V ೩೦
ಆ.ಪು. XI ೯೦ ; XI ೧೨೨

ಪೂರ್ವ ಮತ್ತು ಪಶ್ಚಿಮ ಘಟ್ಟಗಳಲ್ಲಿ ಬೆಳೆಯುವ ಕುಂಕುಮ ಎಂಬ ಮರ ಇದೇ ಇರಬಹುದೆ? ಕಾಯಿನ ಹೊರಮೈಯೆಲ್ಲ ಕೆಂಪು ಪುಡಿಯಿಂದ ಧೂಳಿತವಾಗುತ್ತದೆ. ಪಂಪ ಹೇಳಿರುವಂತೆ ಈ ಮರ ವಸಂತಕಾಲದಲ್ಲಿ ಹೂತಳೆಯುತ್ತದೆ. ಸದ್ಯಕ್ಕೆ ಇದರ ಅನನ್ಯತೆಯನ್ನು ಮೆಲ್ಲೋಟಸ್ ಫಿಲಿಪಿನ್ನಿಸ್ (Mallotus philippineusis) ಎಂದಿಟ್ಟುಕೊಳ್ಳಬಹುದು.

### ಸಂಪಗೆ (Michelia champaca)

ಪಂಪನು ಉಪಯೋಗಿಸಿರುವ ಪರ್ಯಾಯ ಪದಗಳು: ಸಂಪಗೆ, ಚಂಪಕ.

ಆಕರ: ವಿ.ವಿ. I ೧೪೩ ಗ : IV ೨೮ : IV ೬೬ ; V ೩೦ ; V ೩೫ ; XII ೮೭
ಆ.ಪು. XI ೯೫ ಗ; XI ೧೧೯ : XI ೧೧೮ ; XI ೧೧೯ ; XI ೧೩೦ ;
XIII ೧೧
(ಪ್ರ.ಕ. ಸಂಪುಟ ೫೪, ಪುಟ ೧೮ ನೋಡಿ)

ಬನವಾಸಿಯ ಬೆಟ್ಟಗುಡ್ಡಗ್ಗಳಲ್ಲೂ ನಂದನವನಗಳಲ್ಲೂ ಸಾಧಾರಣವಾಗಿ ಬೆಳೆಯುತ್ತಿದ್ದ ಮರ ಸಂಪಗೆ (ವಿವಿ IV ೨೮). ಸಂಪಗೆ ಮೊಗ್ಗಿಗೆ ಯೋಗಿ ವಿಯೋಗಿಗಳಿಬ್ಬರೂ ಮನಸೋತರು. (ವಿ.ವಿ. V ೩೫). ಅರಳಿದ ಸಂಪಗೆ ಹೂವಿನ ಪರಿಮಳ (ಮಲ್ಲಿಗೆಯುದರೊಡನೆ ಕಲೆತು?) ವಸಂತಮಾಸವನ್ನು ಅತಿಶಯವನ್ನಾಗಿ ಮಾಡಿತು (ವಿ.ವಿ. V). ಅರ್ಜುನಗರ್ಭವನ್ನು ಧರಿಸಿದ್ದ ಕುಂತಿಯ ದೇಹ ಕಾಂತಿ ಅರಳಿದ ಸಂಪಗೆಹೂವಿನ ಬಣ್ಣಕ್ಕೆ ತಿರುಗಿತು. (ವಿ.ವಿ. I ೧೪೩ ಗ). ಅರ್ಜುನನನ್ನು ಕಂಡ ಸುಭದ್ರೆಯ ದೇಹಕಾಂತಿ ಕಾಮವೇದನೆಯಿಂದ ಕಳಿತ ಸಂಪಗೆಯಂತೆ ಬಿಳಿಚಿಹೋಯಿತು. (ವಿ.ವಿ. IV ೬೬).

ನಮಗಾಗುವಂತೆಯೇ ದುಂಬಿಗೂ ಸಂಪಗೆಹೂವಿನ ಪರಿಮಳ ತೀಕ್ಷ್ಣ: "ಗಟ್ಟನೆ ಕೊಳೆ ಕಡು ಗಂಪು" ದುಂಬಿಯು ಕೂಡ ಎಲ್ಲಿ ವಾಸನೆ ವೆಗಟಾಗಿ ಬಿಡುವುದೋ ಎಂಬ ಅಂಜಿಕೆಯಿಂದ ದೂರ ನಿಂತಿತಂತೆ (ಆ.ಪು. XI ೧೧೯). ಹೀಗಾಗಿ "ದುಂಬಿಯೊಳ್ಪಗೆಗೊಂಡ ಸಂಪಗೆ" ಎನ್ನುತ್ತಾನೆ, ಪಂಪ (ಆ.ಪು. XI ೧೧೯) ಇದೇ ಭಾವವನ್ನೇ ಯುದ್ಧ ಮಾಡುವುದಕ್ಕೆ ಬಂದ ಶತ್ರುವು (ಸಂಪಗೆ) ಶಿಳೀಮುಖ (ದುಂಬಿ)ವೆಂಬ ಬಾಣಪ್ರಯೋಗವನ್ನು ಎದುರಿಸಲಾರದೆ ದೂರವಾಗಿ ನಿಂತ (ಹಿಮ್ಮೆಟ್ಟಿದ) ಎಂದು ಒಪ್ಪವಿಟ್ಟಿರಬಹುದಲ್ಲವೆ? (ವಿ.ವಿ. XII ೮೭).

ವೃಕ್ಷದೋಹದ ಕ್ರಮದಲ್ಲಿ ಸಂಪಗೆಗೆ ಸಾಂಪ್ರದಾಯಿಕವಾಗಿ ಮೃದುಹಸನವಿಧಿ ಮೀಸಲಾಗಿದೆ. ತೀಕ್ಷ್ಣತರವಾದ ಪರಿಮಳವನ್ನು ಸೂಸುವ ಈ ಹೂವಿಗೆ ಮೃದುವಾದ ನಗು ಎಲ್ಲಿಯ ಸಾಟಿ ಎನಿಸಿರ ಬೇಕು, ಪಂಪನಿಗೆ. ಆದದ್ದರಿಂದ ಕ್ಷೀರಗಂಡೂಷ ವಿಧಿಯನ್ನು ಹೊಸತಾಗಿ ನಿಯಮಿಸಿದ್ದಾನೆ. (ಆ.ಪು. XI ೧೩೦ ಗ.) ಬಣ್ಣ ಪರಿಮಳಗಳೆರಡನ್ನೂ ಪಡೆದು ಇತರ ಹೂಗಳಿಗಿಂತಲೂ ಅಸಾಧಾರಣವಾದ ಮೇಲ್ಮೆಯನ್ನು ದಕ್ಕಿಸಿಕೊಂಡ ಸಂಪಗೆಗೆ (ಆ.ಪು. XI ೧೧೮), ಅದರ ನೆಲೆಗೆ ಸರಿದೂಗುವಂಥ ದೋಹದ ವಿಧಿ ಅವಶ್ಯಕವಾಗಿತ್ತಲ್ಲವೆ?

### ಸುರಯಿ (Mammea longifolia = Ochrocarpus longifolius)

ಆಕರ: ವಿ.ವಿ. I ೫೮

ಆ.ಪು. XI ೧೦೩

ಹೊಸಮುತ್ತಿನ ಕುಚ್ಚಿಗೆ ಪೂತಸುರಯಿಯ ಮುಗುಳುಗುತ್ತಿ ಹೋಲಿಕೆಯಾಗಿದೆ (ಆ.ಪು. XI ೧೦೩); ಮರದಿಂದ ಸುರಿಯುವ ಮುಗುಳುಗಳನ್ನೂ ಕುರಿತು ಆಡಿದ್ದಾನೆ, ಪಂಪ (ವಿ.ವಿ. I ೫೮) ಇವೆರಡೂ ನಿಜವೇ. ಸುರಗಿ ಮೊಗ್ಗುತೆನೆ ಮುತ್ತಿನ ಕುಚ್ಚನ್ನೇ ಹೋಲುತ್ತದೆ. ಬಿರಿದ ಹೂಗಳು ಮರದಿಂದ ಮಳೆಗರೆಯುತ್ತವೆ. ದುಂಬಿಗಳಂತೂ ಝೇಂಕಾರ ಮಾಡುತ್ತ ಹೂಗಳನ್ನು ಹುಡುಕುತ್ತ ಅಟ್ಟಹಾಸ ಮಾಡುತ್ತವೆ.

ಮಾದಕೀಯತೆಯೊಂದಿಗೆ ಮಿಳಿತವಾದ ಪರಿಮಳ ಸುರಗಿಯದು. ಒಣಗಿದರೂ ಮಾಸಲು ಪರಿಮಳವಿದ್ದೇ ಇರುತ್ತದೆ. ನೀರು ಚಿಮುಕಿಸಿದರೆ ಮೊದಲಿನ ಸ್ಥಿತಿಗೆ ಬರುತ್ತದೆ. ಸೊರಬ ಸಾಗರ ಮೊದಲಾದ ಊರುಗಳಲ್ಲಿ ಒಣ ಹೂಸರಗಳು ವಿಕ್ರಯಕ್ಕಿವೆ.

ಪಶ್ಚಿಮ ಘಟ್ಟದ ಮಳೆಕಾಡುಗಳಲ್ಲಿ ಬೆಳೆಯುವ ಮರ ಇದು. ೬೦ ಅಡಿ ಎತ್ತರವನ್ನೂ ಮುಟ್ಟು ತ್ತದೆ. ಉದುರದ ಕಪ್ಪು-ಹಸುರು ಎಲೆಗಳು ಸದಾ ಮರವನ್ನು ಮುತ್ತಿರುತ್ತವೆ.

### ಸೇವಂತಿಗೆ

ಆಕರ: ಆ.ಪು. XI ೧೨೫

(ಪ್ರ.ಕ. ಸಂಪುಟ ೫೪, ಪುಟ ೧೯ ನೋಡಿ)

ಮೇಲೆ ಕಾಣಿಸಿರುವ ಲೇಖನದಲ್ಲಿ "ಗೊಜ್ಜಗೆಯನ್ನು ಸೇವಂತಿಗೆ ಎಂದು ಬಗೆಯುವವರೂ ಉಂಟು" ಎಂದು ಬರೆದಿದ್ದೆ. ಇವೆರಡು ಗಿಡಗಳೂ ಬೇರೆ ಬೇರೆ ಎಂಬ ಅಭಿಪ್ರಾಯ ಈಚೀಚೆಗೆ ಸ್ಪಷ್ಟ ವಾಗಿ ಮೂಡತೊಡಗಿದೆ. ಸೇವಂತಿಗೆ, ಸೂರ್ಯಕಾಂತಿ, ಗೊಜ್ಜಗೆ, ಕುಸುಂಬೆ, ಆಸ್ಟರ್ ಮೊದಲಾದ ಜಾತಿಗಳೆಲ್ಲ ಕಂಪಾಸಿಟೇ ಎಂಬ ಬಳಗಕ್ಕೆ ಸೇರಿದುವೇ ಆದರೂ ಒಂದೊಂದೂ ಪ್ರತ್ಯೇಕವಾದ ಜೀನಸಿನ ಸ್ಪೀಷೀಸುಗಳು.

ಆದರೆ ಪಂಪನು ಉಲ್ಲೇಖಿಸಿರುವ "ಮಗಮಗಿಪ ಕೆಂಪೆಸಳೊಳೆ ತಗುಳ್ದ" ಸೇವಂತಿಗೆ ಯಾವುದಿರ ಬಹುದು ಎಂಬ ಪ್ರಶ್ನೆ ಸದ್ಯಕ್ಕೆ ಬಗೆಹರಿಯದಾಗಿದೆ. ಈ ನುಡಿಕಟ್ಟಿನಿಂದ ಹೂವಿನ ಎಸಳು ಕೆಂಪು ಎಂದು ಅರ್ಥ ಬರುತ್ತದೆ. ಕೆಂಪು ಸೇವಂತಿಗೆಯನ್ನು ನಾನು ಕಾಣೆ. ನಮಗೆ ತಿಳಿದಿರುವ ಸೇವಂತಿಗೆ ಹೂಗಳು ಬಿಳಿಯ ಬಣ್ಣದವು ಅಥವಾ ಹಳದಿ ಬಣ್ಣದವು. "ಕೆಂಪೆಸಳೊಳೆ" ಎನ್ನುವುದರ ಬದಲಾಗಿ "ಕಂಪೆಸೆಳೊಳೆ" ಎಂದು ಪಾಠಭೇದ ಮಾಡಿಕೊಳ್ಳಬಹುದೆ?

## ಹಿಂತಾಳ (Corypha umbraculifera)

ಆಕರ: ವಿ.ವಿ. V ೮೩

ಶಬ್ದಾಲಂಕಾರದ ಆರ್ಭಟದ ಸಂದಿನಲ್ಲಿ ಸಿಕ್ಕಿಕೊಂಡಿರುವ ಗಿಡ ಇದು. ತಾಳೆಮರದಿಂದ ಬೇರೆಯಾದದ್ದು. ಶ್ರೀತಾಳ ಇರಬಹುದೇ ಎಂದು ತಾತ್ಕಾಲಿಕವಾಗಿ ಊಹಿಸಿದ್ದೇನೆ. ಸಾಧಾರಣ ತಾಳೆಗಿಂತಲೂ ಶ್ರೀತಾಳ ಎತ್ತರ ಬೆಳೆಯುತ್ತದೆ; ಎಲೆಯ ಗಾತ್ರವೂ ಹಿರಿಯದಾಗಿರುತ್ತದೆ. ಪುಷ್ಪಗುಚ್ಛ ಕಾಂಡದ ತುದಿ ಭಾಗದಿಂದ ಮೇಲೆದ್ದು ೧೫–೨೦ ಅಡಿ ಎತ್ತರದ ಶಾಖೋಪಶಾಖೆಗಳಾಗಿ ಬೆಳೆಯುತ್ತದೆ.

ತಾಳೆಯೋಲೆ ಕಟ್ಟುಗಳ ಪರಿಚಯವುಳ್ಳವರಿಗೆ ತಾಳ ಶ್ರೀತಾಳಗಳ ಸೂಕ್ಷ್ಮಗಳು ತಿಳಿದಿರುತ್ತವೆ. ಶ್ರೀತಾಳದ ಹಾಳೆಗಳು ದೊಡ್ಡವು ೨½–೩ ಅಂಗುಲ ಅಗಲ, ಎರಡಡಿ ಉದ್ದದ ಓಲೆಗಳನ್ನು ಕತ್ತರಿಸಬಹುದು. ಶ್ರೀತಾಳದ ಕಾಯನ್ನು ಪುಡಿಮಾಡಿ ಅಡಕೆಪುಡಿಯೊಂದಿಗೆ ಬೆರಕೆಮಾಡುವ 'ಮೋಸಕಲೆ' ಈಗ ಅಭಿವೃದ್ಧಿಯಲ್ಲಿದೆ. ಶ್ರೀತಾಳ ಮರವೂ ಎಲೆಯೂ ತಾಳೆಯ ಉಪಯೋಗಗಳನ್ನೇ ಪಡೆದಿವೆ.